# ಕೃಷ್ಣ ಮೂಸ

## (ಶ್ರೀ ಕೃಷ್ಣ ಮರಣದ ನಂತರ ಜೀವನ)

ಕೃಷ್ಣ – ಮೂಸಾ

ಯೇಸು – ಈಸಾ

ನಾನು – ಯಾಸಾ

ನೀನು – ಪಾಸಾ

(ಯಾರೂ ಪಾಸು ಆಗುವುದಿಲ್ಲ. ಎಲ್ಲರೂ ಫೆಯಿಲೇ)


ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org





# ಕೃಷ್ಣ ಮೂಸ

## (ಶ್ರೀ ಕೃಷ್ಣನ ಮರಣದ ನಂತರ ಜೀವನ)


<u>ಗ್ರಂಥಕರ್ತ</u>

**ತ್ರಿಮತ ಐಕ್ಯೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (87) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**

---






<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಫೆಬ್ರವರಿ–2017

ಪ್ರತಿಗಳು : 1000 **ಬೆಲೆ. 65/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ  ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋನಗಳು
97. ಮಾನವತ್ವ
98. ದ್ಯಾನ – ಪ್ರಾರ್ಥನೆ – ನಮಾಜ್



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಟಿ–ಸೃಷ್ಟಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ-
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು-
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು-
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು-
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು-ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು-
ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ - ದೋಬೂಚುಲಾಟ.
111. ಪ್ರಜಲು - ಮಾನವುಲು.
112. ಆಸ್ತಿ - ದೋಸ್ತಿ
113. ದಂತಮು-ಅಂತಮು.
114. ಮಾಯ ಮರ್ಮಮು-ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು-ಬೆದುರು
118. ಶವಮು - ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಕೃಷ್ಣ ಮೂಸ
## (ಶ್ರೀ ಕೃಷ್ಣನ ಮರಣದ ನಂತರ ಜೀವನ)

ಸೃಷ್ಟಿಸಲ್ಪಟ್ಟಿರುವುದು ಸೃಷ್ಠಿ. ಸೃಷ್ಠಿ ಎಂದರೇ ವಿಶ್ವವೆಂದೂ ಅಥವಾ ಪ್ರಪಂಚವೆಂದೂ ಹೇಳಬಹುದು. ವಿವಿಧ ಜೀವರಾಶಿಗಳೊಂದಿಗೆ ಕೂಡಿಕೊಂಡು ವಿಶಾಲವಾಗಿರುವುದು ವಿಶ್ವ. ಮುಖ್ಯವಾದ ಐದು ಮಹಾ ಭೂತಗಳೊಂದಿಗೆ ತಯಾರಿಸಲ್ಪಟ್ಟಿರುವುದು ಪ್ರಪಂಚ. ಪ್ರಪಂಚವನ್ನು ತಯಾರು ಮಾಡಿದವನು ಅಥವಾ ವಿಶ್ವವನ್ನು ತಯಾರಿಸಿದವನು ಅಥವಾ ಸೃಷ್ಠಿಯನ್ನು ಸೃಷ್ಠಿಸಿದವನು ಒಬ್ಬನೇ. ಪ್ರಪಂಚವೆಂದರೂ, ವಿಶ್ವವೆಂದರೂ, ಸೃಷ್ಠಿ ಎಂದರೂ ಒಂದೇ. ಕಾಣಿಸದವನು ಕಾಣಿಸುವ ಪ್ರಪಂಚವನ್ನು ತಯಾರಿಸಿದ್ದಾನೆ. ಕಾಣಿಸದವನು ತಯಾರಿಸಿರುವುದನ್ನು ಸೃಷ್ಠಿ ಎಂದೂ, ವಿಶ್ವವೆಂದೂ, ಪ್ರಪಂಚವೆಂದೂ ಮೂರು ಹೆಸರುಗಳಿಂದ ಕರೆಯುತ್ತಿದ್ದೇವೆ. ಕಾಣಿಸದವನೊಂದಿಗೆ ಕಾಣಿಸುವುದು ತಯಾರಾದಾಗ ಅದಕ್ಕೆ ಒಂದು ವಿಶ್ವ, ಎರಡು ಸೃಷ್ಠಿ, ಮೂರು ಪ್ರಪಂಚ ಎಂದು ಮೂರು ಹೆಸರುಗಳು ಇಡಲಾಗಿವೆ. ಕಾಣಿಸದವನು ಹುಡುಕಿದರೂ ಸಿಗುವುದಿಲ್ಲ. ಹುಡುಕಿದರೂ ಸಿಗದವನನ್ನು ಕಾಣಿಸದವನು ಎನ್ನುವುದು ಸಹಜ. ಹುಡುಕಿದರೂ ಸಿಗದವನಾದ್ದರಿಂದ ಆತನನ್ನು ಒಂದು ಪ್ರತ್ಯೇಕವಾದ ಅರ್ಥದಿಂದ ಕರೆಯುತ್ತಿದ್ದೇವೆ. ಹುಡುಕಿದರೇ ಸಿಗದವನಾದ್ದರಿಂದ 'ಹುಡುಕಲ್ಪಡುವವನು ದೇವರು' ಎಂದು ಅಂದಿದ್ದಾರೆ. ಹುಡುಕಬೇಕಾದವನೇ ಹೊರತು, ಕಾಣಿಸುವವನಲ್ಲ. ಆದ್ದರಿಂದ ದೇವರು ಎಂದು ಸರ್ವಸಾಧಾರಣವಾಗಿ ಹೇಳಬಹುದು. ಕಾಣಿಸದ ದೇವರು ಮೂರು ಹೆಸರುಗಳಿಂದಿರುವ ಕಾಣಿಸುವ ಪ್ರಪಂಚವನ್ನು ತಯಾರಿಸಿದ್ದಾನೆ, ಆದ್ದರಿಂದ ದೇವರೆಂದು ಮೂರು ವಿಧಗಳಾಗಿ ಕರೆಯಲ್ಪಡುತ್ತಿದ್ದಾನೆ. ದೇವರಿಗೆ ವಾಸ್ತವವಾಗಿ ಹೆಸರುಗಳು ಇಲ್ಲ. 'ದೇವರು' ಎನ್ನಲ್ಪಡುವುದು ಕೇವಲ ಬಿರುದು ಮಾತ್ರವೇ ಹೊರತು ಹೆಸರಲ್ಲ. ಆಟಗಾರನಿಗೆ ಒಂದು ಹೆಸರಿನಿಂದ ಪ್ರಮೇಯವಿಲ್ಲದೆ ಅವನು ಆಟ ಆಡುವುದನ್ನನುಸರಿಸಿ ಪ್ಲೇಯರ್ ಎನ್ನುತ್ತಿದ್ದೇವೆ. ಪ್ಲೇಯರ್ ಎಂದರೇ ಆಡುವವನೆಂದು ಅರ್ಥ. ಅಷ್ಟೇ ಹೊರತು ಅದು ಆಟಗಾರನ ಹೆಸರಲ್ಲ ಅಲ್ಲವೆ! ಹಾಗೆಯೇ ಸಿನಿಮಾದಲ್ಲಿ (ಚಲನಚಿತ್ರದಲ್ಲಿ)

ನಟಿಸುವವನನ್ನು ನಟ ಎಂದು ಕನ್ನಡದಲ್ಲಿ, ಯಾಕ್ಟರ್ ಎಂದು ಇಂಗ್ಲೀಷ್‌ನಲ್ಲಿ ಹೇಳುವುದು ನಡೆಯುತ್ತಿದೆ. ಯಾಕ್ಟರ್ ಎನ್ನುವುದು ಆತನ ಹೆಸರಲ್ಲ ಅಲ್ಲವೆ! ಹಾಗೆಯೇ ಕಾಣಿಸದವನು ಮಾಡಿದ ಕೆಲಸವನ್ನನುಸರಿಸಿ ಆತನಿಗೆ ಬಿರುದುಗಳು ಬಂದಿವೆ. ಹಾಗೆಯೇ ದೇವರು ಎನ್ನುವುದು ಬಿರುದೆಂದು ತಿಳಿಯಬೇಕು. ದೇವರಿಗೆ ಹೆಸರಿಲ್ಲ ಆದ್ದರಿಂದ ಆತನನ್ನು ಕೇವಲ ಬಿರುದುಗಳಿಂದಲೇ ಕರೆಯಬೇಕಾಗಿ ಬಂದಿದೆ. ದೇವರು ತಯಾರಿಸಿರುವುದನ್ನು ಮೂರು ವಿಧಗಳ ಹೆಸರುಗಳಿಂದ ಕರೆಯುತ್ತಿದ್ದೇವೆ. ಆದ್ದರಿಂದ ದೇವರಿಗೂ ಸಹ ಮೂರು ವಿಧಗಳ ಬಿರುದುಗಳು ಬಂದಿವೆ.

ದೇವರು ತಯಾರಿಸಿರುವುದನ್ನು ಒಂದು ಸೃಷ್ಠಿಯೆನ್ನುವ ಹೆಸರಿನಿಂದ ಕರೆಯುತ್ತಿದ್ದೇವೆ. ಸೃಷ್ಠಿಯನ್ನು ತಯಾರಿ ಮಾಡಿದವನು ಆದ್ದರಿಂದ ಆತನನ್ನು 'ಸೃಷ್ಠಿಕರ್ತ' ಎಂದು ಕರೆಯುತ್ತಿದ್ದೇವೆ. ವಿಶ್ವವನ್ನು ತಯಾರು ಮಾಡಿದವನನ್ನು 'ಪರಮಾತ್ಮ' ಎನ್ನುತ್ತಿದ್ದೇವೆ. ಪ್ರಪಂಚವನ್ನು ತಯಾರು ಮಾಡಿದವನಾಗಿ 'ಅಲ್ಲಾಹ್' ಎಂದು ಕರೆಯುತ್ತಿದ್ದೇವೆ. ದೇವರಿಗೆ ಮುಖ್ಯವಾಗಿ ಮೂರು ಬಿರುದುಗಳಿವೆಯೆಂದು ಅವುಗಳೇ ಒಂದು ಸೃಷ್ಠಿಕರ್ತ, ಎರಡು ಪರಮಾತ್ಮ, ಮೂರು ಅಲ್ಲಾಹ್ ಎಂದು ಹೇಳುತ್ತಿದ್ದೇವೆ. ವಿವಿಧ ಜೀವರಾಶಿಗಳೊಂದಿಗೆ ಕೂಡಿಕೊಂಡು ವಿಶಾಲವಾಗಿದ್ದ ವಿಶ್ವವನ್ನು ತಯಾರಿಸಿದವನು ಪರಮಾತ್ಮ ಎಂದೂ, ಸೃಷ್ಠಿಯನ್ನು ತಯಾರಿಸಿದವನು ಆದ್ದರಿಂದ ಸೃಷ್ಠಿಕರ್ತ ಎಂದೂ, ಪ್ರಪಂಚವನ್ನು ತಯಾರಿಸಿದವನು ಆದ್ದರಿಂದ ಅಲ್ಲಾಹ್ ಎಂದು ಕರೆಯಲ್ಪಡುತ್ತಿದ್ದಾನೆ. ಸೃಷ್ಠಿ ತಯಾರಾದ ನಂತರ ದೇವರು ಆಕಾಶವಾಣಿಯಿಂದ ತನ್ನ ಜ್ಞಾನವನ್ನು ಸೂರ್ಯನಿಗೆ ಹೇಳಿದಾಗ, ಸೂರ್ಯನು ಭೂಮಿ ಮೇಲೆ ಮನುವು ಎಂಬ ವ್ಯಕ್ತಿಗೆ ಹೇಳುವುದು ನಡೆದಿದೆ. ಸೂರ್ಯನು ಮನುವು ಎಂಬ ವ್ಯಕ್ತಿಗೆ ತೆಲುಗು ಭಾಷೆಯಲ್ಲಿಯೇ ಹೇಳುವುದಾಗಿದೆ. ಆ ಕಾಲದಲ್ಲಿ ಭಾರತದೇಶದಲ್ಲಿಯೂ ಉಳಿದ ದೇಶಗಳಲ್ಲಿಯೂ ತೆಲುಗು ಭಾಷೆಯೇ ಇರುತ್ತಿತ್ತು. ತೆಲುಗು ಭಾಷೆ ದಕ್ಷಿಣ ಭಾರತದೇಶದಲ್ಲಿ ತಯಾರಾಗಿದೆ. ಅಂದಿನ ಕಾಲದಲ್ಲಿ ದಕ್ಷಿಣ ಭಾರತದೇಶದೊಂದಿಗೆ ಬೆರೆತಿರುವ ಶ್ರೀಲಂಕದಲ್ಲಿಯೇ ತೆಲುಗು

ಭಾಷೆ ತಯಾರಾಗಿದೆ. ಆದ್ದರಿಂದ ಸ್ವಚ್ಛವಾದ ತೆಲುಗು ಭಾಷೆಯಲ್ಲಿ 'ಶ್ರೀಲಂಕ' ಎನ್ನುವ ದೇಶ ಇಂದಿಗೂ ಇದೆ. 'ಲಂಕ' ಎನ್ನುವುದು ತೆಲುಗು ಪದವೇ, 'ಶ್ರೀ' ಎನ್ನುವುದು ತೆಲುಗು ಪದವೇ ಎಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಶ್ರೀಲಂಕ ಆ ಕಾಲದಲ್ಲಿ ಭಾರತದೇಶದಲ್ಲಿನ ಭಾಗವಾಗಿಯೇ ಇತ್ತು. ಆದ್ದರಿಂದ ಲಂಕೆಯನ್ನು ಸಹ ದಕ್ಷಿಣ ಭಾರತದೇಶವಾಗಿ ಹೇಳುತ್ತಿದ್ದೇವೆ. ದಕ್ಷಿಣ ಭಾರತದೇಶದಲ್ಲಿ ಲಂಕ, ತಮಿಳುನಾಡು, ಕೇರಳ, ಆಂಧ್ರ, ಕರ್ನಾಟಕ ರಾಜ್ಯಗಳಲ್ಲಿ ಇರುವಾಗ ದಕ್ಷಿಣ ಭಾರತದೇಶಕ್ಕೆ ಅನುಸಂಧಾನ ರಾಷ್ಟ್ರಗಳಾಗಿ ಮಹಾರಾಷ್ಟ್ರ, ಒರಿಸ್ಸಾ ಇದ್ದವು. ಭಾರತದೇಶದಲ್ಲಿನ ಮೊದಲ ಭಾಷೆ ತೆಲುಗು ಭಾಷೆಯೇ. ದಕ್ಷಿಣ ಭಾರತದೇಶದಲ್ಲಿನ ಮನುವು ಎಂಬ ವ್ಯಕ್ತಿಗೆ ಸೂರ್ಯನು ತೆಲುಗು ಭಾಷೆಯಲ್ಲಿಯೇ ತನಗೆ ತಿಳಿದ ಜ್ಞಾನವನ್ನು ಹೇಳುವುದಾಗಿದೆ. ಅಂದಿನ ಜ್ಞಾನಿಗಳೆಲ್ಲರೂ ಮನುವಿನಿಂದ ಜ್ಞಾನವನ್ನು ತಿಳಿದವರಾಗಿ ಇದ್ದರು. ಮನುವು ಸೂರ್ಯನಿಗೆ ಆದಿತ್ಯನೆಂದು ಬಿರುದನ್ನು ಇಟ್ಟಂತೆ, ಮನುವು ಹೇಳಿದ ಜ್ಞಾನವನ್ನು ತಿಳಿದ ಜ್ಞಾನಿಗಳೆಲ್ಲರೂ ಸೇರಿ, ಚೆನ್ನಾಗಿ ಆಲೋಚಿಸಿ ದೇವರಿಗೆ ಮೂರು ಬಿರುದುಗಳು ಇಡಲಾಗಿದೆ. ಅಂದಿನವರೆಲ್ಲರೂ ತೆಲುಗು ಭಾಷೆ ತಿಳಿದವ ರಾದ್ದರಿಂದ, ಎಲ್ಲರೂ ಸೇರಿ ತೆಲುಗು ಭಾಷೆಯಲ್ಲಿಯೇ ಮೂರು ಹೆಸರುಗಳಂತೆ ಇರುವ ಮೂರು ಬಿರುದುಗಳನ್ನು ದೇವರಿಗೆ ಹೇಳಿದ್ದಾರೆ.

ಅದರಲ್ಲಿ ಸೃಷ್ಟಿಕರ್ತ ಎನ್ನುವ ಪದವಾಗಲೀ, ಪರಮಾತ್ಮ ಎನ್ನುವ ಶಬ್ದವಾಗಲೀ, ಅಲ್ಲಾಹ್ ಎನ್ನುವ ಮಾತಾಗಲೀ ಎಲ್ಲಾ ಪೂರ್ತಿಯಾಗಿ ಸ್ವಚ್ಛವಾದ ತೆಲುಗು ಪದಗಳೇ ಎಂದು ಹೇಳಬಹುದು. ಮೂರಕ್ಕಿಂತ ಮೊದಲೇ ಹೆಸರು ಅಲ್ಲದಿರುವಂತಹ ಬಿರುದು ಆದ 'ದೇವರು' ಎನ್ನುವ ಪದವೂ ಸಹ ಪೂರ್ತಿ ತೆಲುಗು ಭಾಷೆಯಿಂದ ತಯಾರಾಗಿದೆಯೆಂದೇ ಹೇಳಬಹುದು. ದೇವರು ಎಂದರೇ ಹುಡುಕಲ್ಪಡುವವನು ಎನ್ನುವ ಅರ್ಥವನ್ನು ತೆಲುಗು ಭಾಷೆಯಲ್ಲಿಯೇ ಇರುವಂತೆ ತಯಾರಿಸಿದ್ದಾರೆ. ಆದರೇ ಕೃತಯುಗದಲ್ಲಿಯೇ ತಯಾರಾದ ಹೆಸರುಗಳಂತೆ ಇರುವ ದೇವರ ಬಿರುದುಗಳು ಮೂರು ಸ್ವಚ್ಛವಾದ ತೆಲುಗು ಭಾಷೆಯಲ್ಲಿನವೇ

ಎಂದು ಯಾರಿಗೂ ತಿಳಿದಿಲ್ಲ. ಈಗ ನಾವು ಹೇಳಿದರೂ ಕೇಳುವ ಪರಿಸ್ಥಿತಿಯಲ್ಲಿ ಇಲ್ಲ.

**ಪ್ರಶ್ನೆ :– ಈ ದಿನ ಭೂಮಿ ಮೇಲೆ ಒಟ್ಟಾರೆ ಹನ್ನೆರಡು ಮತಗಳಿದ್ದರೂ ಅದರಲ್ಲಿ ಮೂರು ಮತಗಳು ಮಾತ್ರವೇ ಮುಖ್ಯವಾಗಿ ಇವೆ. ಆ ಮೂರರಲ್ಲಿ ಒಂದು ಹಿಂದೂ ಮತ, ಎರಡು ಕ್ರೈಸ್ತ ಮತ, ಮೂರು ಇಸ್ಲಾಮ್ (ಮುಸ್ಲೀಮ್) ಮತವಾಗಿ ಇವೆ. ಹಿಂದೂ ಮತ ಮೊದಲು ಮತವಾಗಿ ಇಲ್ಲದಿದ್ದರೂ, ಕ್ರೈಸ್ತ ಮತ ಹುಟ್ಟಿದ ನಂತರ ಹಿಂದೂಗಳನ್ನು ಹಿಂದೂ ಮತ ಎಂದಿದ್ದಾರೆ. ಹಿಂದೂ ಮತವೊಂದರ ಹುಟ್ಟುವಿಕೆ ಯಾರಿಗೂ ತಿಳಿದಿಲ್ಲ. ಅದಕ್ಕೆ ಇಂತಹ ಪ್ರವಕ್ತ ಎಂದು ಸಹ ಇಲ್ಲ. ಕ್ರೈಸ್ತ ಮತವೊಂದರ ಪ್ರವಕ್ತ ಇದ್ದಾನೆ, ಕ್ರೈಸ್ತ ಮತವೊಂದರ ಹುಟ್ಟುವಿಕೆ ಎರಡು ಸಾವಿರ ವರ್ಷಗಳು. ಇಸ್ಲಾಮ್ ಮತವೊಂದರ ಹುಟ್ಟುವಿಕೆ ಸುಮಾರು 1400 ವರ್ಷಗಳು. ಇಸ್ಲಾಮ್ ಮತವೊಂದರ ಪ್ರವಕ್ತ ಮುಹಮ್ಮದ್ ಪ್ರವಕ್ತರವರು. ಇಸ್ಲಾಮ್ ಮತಸ್ಥರು ದೇವರನ್ನು 'ಅಲ್ಲಾಹ್' ಎಂದು ಕರೆಯುತ್ತಿದ್ದಾರೆ. ಇಸ್ಲಾಮ್ ಮತದಲ್ಲಿ ಮಾತ್ರ ದೇವರನ್ನು ಅಲ್ಲಾಹ್ ಎಂದು ಹೇಳುವುದು ನಡೆಯುತ್ತಿದೆ. ಇಸ್ಲಾಮ್ ಮತ (ಮುಸ್ಲಿಮ್ ಮತ) 1400 ವರ್ಷಗಳ ಕೆಳಗೆ ಹುಟ್ಟಿದ್ದರೇ ಅದರ ಪ್ರಕಾರ ಅಲ್ಲಾಹ್ ಎನ್ನುವ ಪದ 1400 ವರ್ಷಗಳಿಂದ ಮಾತ್ರವೇ ಬಳಕೆಗೆ ಬಂದಿದೆ. ಹಿಂದೂ ಮತದಲ್ಲಿ ದೇವರನ್ನು "ಪರಮಾತ್ಮ" ಎಂದು ಕರೆಯುತ್ತಿದ್ದಾರೆ. ನಂತರ ಎಷ್ಟೋ ಹೆಸರುಗಳಿಂದ (ಬಿರುದುಗಳಿಂದ) ಕರೆಯುತ್ತಿದ್ದಾರೆ. ಕ್ರೈಸ್ತ ಮತದಲ್ಲಿ 'ಯೆಹೋವಾ' ಎನ್ನುವ ಹೆಸರಿಂದ ಕರೆಯುತ್ತಿದ್ದಾರೆ. ಒಂದು ಇಸ್ಲಾಮ್ ಮತದಲ್ಲಿ ಮಾತ್ರ ದೇವರನ್ನು 'ಅಲ್ಲಾಹ್' ಎನ್ನುವ ಹೆಸರಿನಿಂದ(ಬಿರುದಿನಿಂದ) ಹೇಳುತ್ತಿದ್ದಾರೆ. ಸಂಸ್ಕೃತ ಭಾಷೆಯಲ್ಲಿ ಭಗವದ್ಗೀತೆ ಬರೆಯಲಾಗಿದೆ. ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 17, 18 ಶ್ಲೋಕಗಳಲ್ಲಿ ದೇವರನ್ನು ಪರಮಾತ್ಮಯೆಂದೂ, ಪುರುಷೋತ್ತಮನೆಂದೂ ಎರಡು ಹೆಸರುಗಳಿಂದ ಹೇಳುವುದಾಗಿದೆ. ಬೈಬಲ್ ಗ್ರಂಥದಲ್ಲಿ 'ಯೆಹೋವಾ' ಎಂದು ಹೇಳಲ್ಪಟ್ಟಿದ್ದಾನೆ. ಅಂತಿಮ ದೈವ ಗ್ರಂಥವಾದ ಖುರಾನ್ ಗ್ರಂಥದಲ್ಲಿ ದೇವರನ್ನು ಅಲ್ಲಾಹ್ ಎಂದು**

**ಬರೆಯುವುದು ನಡೆದಿದೆ. ಇದರ ಪ್ರಕಾರ ಅಲ್ಲಾಹ್ ಎನ್ನುವ ಪದವು 1400 ವರ್ಷಗಳ ಪೂರ್ವದಲ್ಲಿ ಅರಬ್ಬೀ ಭಾಷೆಯಲ್ಲಿ ಹುಟ್ಟಿದೆಯೆಂದು, ಖುರಾನ್ ಗ್ರಂಥದಲ್ಲಿ ಬರೆಯಲಾಗಿದೆಯೆಂದು ಹೇಳಬಹುದು. ಅಲ್ಲಾಹ್ ಎನ್ನುವ ಪದವನ್ನು ಒಬ್ಬ ಮುಸ್ಲಿಮ್‌ರು ಹೊರತು ಇತರ ಮತದವರು ಬಳಸದಿರುವಾಗ ಸೃಷ್ಟಿ ಆದಿಯಲ್ಲೇ ಇರುವ ಇಂದೂ ಸಮಾಜದಲ್ಲಿಯೇ ಜ್ಞಾನಿಗಳು ದೇವರನ್ನು ಅಲ್ಲಾಹ್ ಎಂದು ಕರೆದಿದ್ದಾರೆಂದು ನೀವು ಹೇಳುವುದು ಬಹಳ ಅಸತ್ಯವೆಂದು ಅರ್ಥವಾಗುತ್ತಿದೆ. ಇದಕ್ಕೆ ನೀವು ಏನೆಂದು ಉತ್ತರ ಹೇಳುತ್ತೀರಾ?**

**ಉತ್ತರ :–** ಯಾರ ಮೂಗಿನ ನೇರವಾಗಿ ಅವರು ಮಾತನಾಡುವುದು ಸಹಜ. ಆದರೇ ಮಾತನಾಡಿದ ಮಾತು ಸತ್ಯವಾ? ಅಸತ್ಯವಾ? ಎಂದು ತಪ್ಪದೆ ನೋಡಬೇಕು. ಈದಿನ ಮುಸ್ಲಿಮ್‌ರಿಂದ ಕರೆಯಲ್ಪಡುವ 'ಅಲ್ಲಾಹ್' ಎನ್ನುವ ಪದ ಈ ಮಧ್ಯ ಕಾಲದಲ್ಲಿನದೇ ಎಂದು ಹೇಳುವುದಕ್ಕೆ ಖುರಾನ್ ಗ್ರಂಥವೇ ಆಧಾರವಾಗಿದೆ. ಖುರಾನ್ ಗ್ರಂಥವನ್ನು ನೋಡಿದ ಯಾವ ಮನುಷ್ಯನಾದರೂ ಅಲ್ಲಾಹ್ ಎನ್ನುವ ಪದ ಇಸ್ಲಾಮ್ ಮತದೊಂದಿಗೆ ಖುರಾನ್ ಗ್ರಂಥದೊಂದಿಗೆ ಆರಂಭವಾಗಿದೆಯೆಂದು ಯಾರಾದರೂ ಹೇಳಬಹುದು. ಇದೆಲ್ಲವೂ ನೋಡಿದ ನಂತರ ನಮ್ಮ ಮಾತನ್ನು ಯಾರೂ ನಂಬುವುದಿಲ್ಲ. ನಮ್ಮ ಮಾತು ಪೂರ್ತಿ ಅಸತ್ಯವಾಗಿ ಕಾಣಿಸುತ್ತದೆ. ನನ್ನ ಮಾತು ಸತ್ಯವೋ ಅಲ್ಲವೋ ನಂತರ ನೋಡೋಣ. ಮೊದಲು ಗಮನಿಸಬೇಕಾದ ವಿಷಯವನ್ನು ಕುರಿತು ನೋಡೋಣ. ಪೂರ್ವದಲ್ಲಿ ದರ್ಜೀ (ಟೈಲರ್) ರವರು (ಬಟ್ಟೆಗಳನ್ನು ಹೊಲಿಯುವವರು) ಇಲ್ಲದಿರುವಾಗ, ಕೆಲವರು ಸ್ವತಃವಾಗಿ ಕೈಯಿಂದ ಹೊಲಿದುಕೊಂಡು ಸೊಂಟದ ಕೆಳಗೆ ಬಟ್ಟೆಯನ್ನು ಕಟ್ಟಿಕೊಳ್ಳುತ್ತಿದ್ದರು. ಹಾಗೆ ಕಟ್ಟಿಕೊಳ್ಳುವುದರಿಂದ ಕೆಳಗೆ ತಣ್ಣನೆಯ ಗಾಳಿ ತಗಲುತ್ತಿತ್ತು. ಮೇಲೆ ಎಷ್ಟು ಅಗಲವಿರುತ್ತದೋ ಕೆಳಗೂ ಸಹ ಅಷ್ಟೇ ಅಗಲ ಇರುವುದರಿಂದ ಕಾಲುಗಳಿಗೆ ಎಂತಹ ಅಡ್ಡ ಇರದಂತೆ ಎಲ್ಲಾಕಡೆ ಅಲುಗಾಡುತ್ತಿದ್ದವು. ಅದರ ಆಕಾರ ಚತುರಸ್ರಾಕಾರದಲ್ಲಿ ಇತ್ತು. ಚತುರಸ್ರಾಕಾರವಿರುವ ಬಟ್ಟೆಯನ್ನು ಎರಡು ಮಡತೆಗಳಾಗಿ ತೆಗೆದುಕೊಂಡು

ಸೊಂಟಕ್ಕೆ ತಕ್ಕ ವಿಸ್ತೀರ್ಣಕ್ಕಿಂತ ಎರಡು ಪಟ್ಟು ವಿಸ್ತೀರ್ಣವಿರುವ ಎರಡು ಮಡತೆಗಳ ಬಟ್ಟೆಯನ್ನು ತೆಗೆದುಕೊಂಡು ಒಂದು ಕಡೆ ಅಳತೆಯಲ್ಲಿ ಅರ್ಧದವರೆಗು ಎರಡು ಮಡತೆಗಳನ್ನು ಕತ್ತರಿಸಿ ಕೈ ಹೊಲಿಗೆ ಹಾಕುತ್ತಿದ್ದರು. ಮೇಲಿನ ಭಾಗದಲ್ಲಿ ಇಂಚು ಅಳತೆಯಲ್ಲಿ ಮಡಚಿ ಕೈಹೊಲಿಗೆ ಹಾಕಿ ಚಿಕ್ಕ ಹಗ್ಗವನ್ನು ಮಡತೆಯಲ್ಲಿ ಏರಿಸಿ ಸೊಂಟಕ್ಕೆ ಕಟ್ಟಿಕೊಳ್ಳುತ್ತಿದ್ದರು. ಹಾಗೆ ತಯಾರು ಮಾಡಿದ ಅದರ ಹೆಸರು "ಚಲ್ಲಾಡ" ಎಂದು ಕರೆಯುತ್ತಿದ್ದರು. ಅದರ ಆಕಾರವನ್ನು ಕೆಳಗೆ ನೋಡಬಹುದು.



**ತಯಾರು ಮಾಡಿದಾಗ ಇರುವ ಆಕಾರ**



**ಧರಿಸಿದ ನಂತರ ಇರುವ ಆಕಾರ**

ಮೇಲಿನ ಆಕಾರದಿಂದ ತಯಾರು ಮಾಡಿರುವುದನ್ನು ಸೊಂಟಕ್ಕೆ ಕಟ್ಟಿಕೊಂಡಾಗ ಮೇಲಿನ ಅಗಲ ಅರ್ಧಕ್ಕೆ ಕಡಿಮೆಯಾಗುತ್ತಿತ್ತು. ಕೆಳಗೆ ಮೊಣಕಾಲಿನವರೆಗು ಉದ್ದ ಇರುತ್ತಿತ್ತು. ಅದನ್ನು ಕಟ್ಟಿಕೊಳ್ಳುವುದರಿಂದ ಕಾಲಿಗೆ ಅಗಲವಾಗಿದ್ದು ಗಾಳಿ ತೂರುವುದಕ್ಕೆ ಅನುಕೂಲವಾಗಿ ಇದ್ದು, ನಡೆದಾಗಲೆಲ್ಲಾ ಕದಲುತ್ತಾ ಗಾಳಿ ಬೀಸಿದಂತೆ ಮಾಡುವುದರಿಂದ, ತಣ್ಣಗೆ ಅಲ್ಲಾಡುತ್ತಿರುವುದರಿಂದ ಅದನ್ನು "ಚಲ್ಲಾಡ" ಎನ್ನುವ ಹೆಸರಿನಿಂದ ಕರೆಯುತ್ತಿದ್ದರು. ನೂರ ಐವತ್ತು, ನೂರ ಅರವತ್ತು ವರ್ಷಗಳ ಕೆಳಗೆ ಪ್ರತಿ ಹಳ್ಳಿಯಲ್ಲೂ ಈ ಚಲ್ಲಾಡಗಳನ್ನು ಗಂಡಸರೆಲ್ಲರೂ ಕಟ್ಟಿಕೊಳ್ಳುತ್ತಿದ್ದರು. ಕಾಲಕ್ರಮದಲ್ಲಿ ಹಳ್ಳಿಗಳಿಗು ಸಹ ಟೈಲರ್‌ಗಳು ಬರುವುದರಿಂದ ಕೈ ಹೊಲಿಗೆ ಚಲ್ಲಾಡಗಳು ಇಲ್ಲದಂತೆ ಹೋಗಿವೆ. ಈ ಕಾಲದಲ್ಲಿ ಚಲ್ಲಾಡಗಳನ್ನು ನೋಡಿದವರು ಬಹಳ ಮಟ್ಟಿಗೆ ಯಾರೂ ಇಲ್ಲವೆಂದು

ಹೇಳಬಹುದು. ಕನಿಷ್ಟ ಅದರ ಹೆಸರು ಕೇಳಿದವರು ಸಹ ಅಪರೂಪವಾಗಿದ್ದಾರೆ. ನೂರು, ನೂರ ಐವತ್ತು ಸಂವತ್ಸರಗಳ ಕೆಳಗೆ ಹೆಚ್ಚಿನ ಜನ ಚಲ್ಲಾಡಗಳನ್ನು ಬಳಸುತ್ತಿದ್ದರು. ಐವತ್ತು ಅಥವಾ ಅರವತ್ತು ವರ್ಷಗಳ ಕೆಳಗೆ ಸಹ ಕೆಲವು ಹಳ್ಳಿಗಳಲ್ಲಿ ಚಲ್ಲಾಡಗಳು ಕಟ್ಟಿಕೊಳ್ಳುವುದನ್ನು ನಾನು ನೋಡಿದ್ದೇನೆ. ನಂತರ ಅವು ಇಲ್ಲದಂತೆ ಹೋಗುವುದು ನಡೆದಿದೆ. ಈದಿನ ಪಟ್ಟಣ ಪ್ರಾಂತಗಳಲ್ಲಿ "ಚಲ್ಲಾಡಗಳು ಎಂದರೇ ಏನೋ ನಮಗೆ ತಿಳಿದಿಲ್ಲ" ಎನ್ನುತ್ತಿದ್ದಾರೆ.

ಈ ವಿಧವಾಗಿ ಕಾಲಕ್ರಮದಲ್ಲಿ ತಿಳಿಯದಂತೆ ಹೋದ ಚಲ್ಲಾಡಗಳನ್ನು ಕುರಿತು ನಾವು ಹೇಳಿದರೂ, ನಾವು ಹೇಳುವುದು ಸತ್ಯವೋ ಅಸತ್ಯವೋ ನಿರ್ಧಾರಿಸಿಕೊಳ್ಳಲಾರದೆ ಹೋಗುತ್ತಿದ್ದಾರೆ. ಅಲ್ಲಾಹ್ ಎನ್ನುವ ಪದವೂ ಸಹ ಪೂರ್ವವಿದ್ದು ನಂತರ ಇಲ್ಲದೆ ಹೋಗುವುದರಿಂದ ಪೂರ್ವದಲ್ಲಿ ಆ ಪದ ಇದೆಯೆಂದು ನಾವು ಹೇಳಿದರೂ ಮನುಷ್ಯರು ನಂಬುವ ಸ್ಥಿತಿಯಲ್ಲಿಲ್ಲ. ಪುನಃ ಈಗ ಚಲ್ಲಾಡ ವಿಷಯಕ್ಕೇ ಬರೋಣ. ಪೂರ್ವದಿಂದ ಸ್ವಲ್ಪ ಕಾಲ ಇಲ್ಲದಂತೆ ಹೋದ ಸಲ್ಲಾಡಗಳು ಪುನಃ ಈ ದಿನ ಎಲ್ಲರ ಹತ್ತಿರಕ್ಕೆ ಬಂದಿವೆ. ಅವುಗಳನ್ನು ಬಹಳ ಜನ ಧರಿಸುತ್ತಿದ್ದಾರೆ. ಆದರೂ ಅವು ಪೂರ್ವದಲ್ಲದ್ದ ಚಲ್ಲಾಡಗಳೇ ಎಂದು ಯಾರೂ ಗುರುತಿಸಲಿಲ್ಲ. ಈದಿನ ಅವುಗಳನ್ನು ಇಂಗ್ಲೀಷ್ ಭಾಷೆಯಲ್ಲಿ ಷಾಟ್‌ಗಳೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಈದಿನವಿರುವ ಷಾಟ್‌ಗಳೇ ಪೂರ್ವವಿದ್ದ ಚಲ್ಲಾಡಗಳೆಂದು ಯಾರಿಗೂ ತಿಳಿಯದಂತೆ ಹೋಗಿದೆ. ಇಂಗ್ಲೀಷ್‌ನಲ್ಲಿ ಷಾಟ್‌ಗಳೆಂದು ಹೇಳಲ್ಪಡುವವೇ ಪೂರ್ವದ ಚಲ್ಲಾಡಗಳೆಂದು ಯಾರೂ ಗುರುತಿಸಲಾದೆ ಹೋಗಿದ್ದಾರೆ. ಅದೇ ರೀತಿ ಪೂರ್ವವಿರುವ ಅಲ್ಲಾಹ್ ಎನ್ನುವ ಪದವೇ ಈದಿನ ಖುರಾನ್‌ನಲ್ಲಿ ಹೇಳಲಾಗಿರುವ ಪದವೆಂದು ಯಾರೂ ಅಂದುಕೊಳ್ಳುತ್ತಿಲ್ಲ. ಪೂರ್ವದಲ್ಲಿ ಅಲ್ಲಾಹ್ ಪದವಿದ್ದಂತೆ ತಿಳಿಯದೇ ಹೋಗಿರುವುದರಿಂದ ಈಗ ನಾವು ಹೇಳಿದರೂ ನಂಬಲಾರದಂತಿದ್ದಾರೆ. ಪೂರ್ವವಿದ್ದ ಚಲ್ಲಾಡಗಳು ಹೆಸರು ಬದಲಾಯಿಸಿಕೊಂಡು ಷಾಟ್‌ಗಳೆಂದು ಹೇಳಲ್ಪಡುತ್ತಿರುವುದರಿಂದ, ಚಲ್ಲಾಡಗಳೇ ಷಾಟ್‌ಗಳಾಗಿ ಬಂದಿವೆಯೆಂದು ಗುರಿತಿಸಲಿಲ್ಲವೆಂದರೇ

ಒಂದು ವಿಧವಾಗಿ ಒಪ್ಪಿಕೊಳ್ಳಬಹುದು. ಆದರೇ ಪೂರ್ವದಲ್ಲಿ ಜ್ಞಾನಿಗಳು ಹೇಳಿದ ಅಲ್ಲಾಹ್ ಎನ್ನುವ ದೇವರ ಗುರುತನ್ನು ಈದಿನವಿದೆಯೆಂದು ನಾವು ಹೇಳಿದರೂ ಕೇಳದಂತಿರುವುದು, ನಂಬದಂತಿರುವುದು ವಿಚಿತ್ರವೆಂದೇ ಹೇಳಬಹುದು.

ಕೃತಯುಗದ ಪ್ರಾರಂಭದಲ್ಲಿ ತೆಲುಗು ಭಾಷೆ ಇರುವುದರಿಂದ ದಕ್ಷಿಣ ಭಾರತದೇಶದ ಜ್ಞಾನಿಗಳು ತೆಲುಗು ಭಾಷೆಯಲ್ಲಿ ದೇವರ ಹೆಸರನ್ನು ಮೂರು ವಿಧಗಳಲ್ಲಿ ಹೇಳುವುದಾಗಿದೆ. ಸೃಷ್ಠಿಯನ್ನು ಸೃಷ್ಠಿಸಿದವನು ದೇವರು ಆಗಿರುವುದರಿಂದ ದೇವರನ್ನು ಸೃಷ್ಠಿಕರ್ತ ಎಂದು ಕರೆದಿದ್ದಾರೆ. ಕರ್ತ ಎಂದರೆ ತಯಾರಿ ಮಾಡಿದವನೆಂದು ಹೇಳಬಹುದು. ಸೃಷ್ಠಿಯನ್ನು ತಯಾರು ಮಾಡಿದವನೆಂದು ದೇವರನ್ನು ಸೃಷ್ಠಿಕರ್ತ ಎನ್ನುವ ಹೆಸರು (ಬಿರುದು) ನಿಂದ ಕರೆದಿದ್ದಾರೆ. ಆತ್ಮಕ್ಕಿಂತ ಬೇರೆಯಾಗಿದ್ದಾನೆನ್ನುವ ಭಾವನೆಯಿಂದ ಪರಮಾತ್ಮ ಎಂದು ಕರೆದಿದ್ದಾರೆ. ಈ ಎರಡು ಹೆಸರುಗಳು ಎಂದರೇ ಬಿರುದುಗಳು ತೆಲುಗು ಅರ್ಥದಿಂದ ಕೂಡಿಕೊಂಡಿವೆ. ಹಾಗೆಯೇ ಆದಿನ ತೆಲುಗು ಪದವಾಗಿ ಅಲ್ಲಾಹ್ ಎನ್ನುವ ಪದವನ್ನು ಹೇಳಿದ್ದಾರೆ. ಸೂರ್ಯ ಗ್ರಹ ಹೇಳಿದಂತೇ ಜಿಬ್ರಯೇಲ್ ಗ್ರಹವೂ ಸಹ ತೆಲುಗು ಪದವನ್ನೇ ಹೇಳಿದೆ. ಸೂರ್ಯನು ಮನುವಿಗೆ ಭೂಮಿ ಮೇಲೆ ತೆಲುಗು ಭಾಷೆಯಲ್ಲಿ ಹೇಳಿದ ಜ್ಞಾನವನ್ನೇ ಜಿಬ್ರಯೇಲ್ ಸಹ ಹೇಳುವುದು ನಡೆದಿದೆ. ಜಿಬ್ರಯೇಲ್ ತಾನು ಕೇಳಿದ ಅಲ್ಲಾಹ್ ಪದವನ್ನೇ ಪುನಃ ಖುರಾನ್ ಜ್ಞಾನದಲ್ಲಿ ಹೇಳುವುದು ನಡೆದಿದೆ. ಖುರಾನ್ ಗ್ರಂಥದಲ್ಲಿ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಜ್ಞಾನವನ್ನು ಹೇಳಿದಾಗ ಅರಬ್ಬೀ ಭಾಷೆಯಲ್ಲಿ ಹೇಳಿದರೂ, ದೇವರು ಎನ್ನುವ ಮಾತನ್ನು ಹೇಳಬೇಕಾಗಿ ಬಂದಾಗ ಪೂರ್ವದಲ್ಲಿ ತಾನು ಆಕಾಶದಲ್ಲಿ ಕೇಳಿದ ಹೆಸರನ್ನೇ ಅಲ್ಲಾಹ್ ಎಂದು ಹೇಳಿದ್ದಾನೆ. ಖುರಾನ್ ಗ್ರಂಥವೆಲ್ಲವೂ ಅರಬ್ಬೀ ಭಾಷೆಯಲ್ಲಿ ಇರುವುದರಿಂದ ಅಲ್ಲಾಹ್ ಎನ್ನುವ ಪದವೂ ಸಹ ಅರಬ್ಬೀ ಭಾಷೆಯೇ ಎಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ.

ಅಲ್ಲಾಹ್ ಎನ್ನುವ ಪದ ಮೊದಲಿನಿಂದ ತೆಲುಗು ಭಾಷೆಯಲ್ಲಿಯೇ ಇದೆಯೆನ್ನುವ ವಿಷಯ ಪ್ರಪಂಚದಲ್ಲಿ ಈದಿನ ಯಾರಿಗೂ ತಿಳಿಯದಂತೆ ಹೋಗಿದೆ. ಇತರ ಭಾಷೆಯಲ್ಲಿ ಮಾತನಾಡುವಾಗ ಯಾವುದಾದರೂ ಒಂದು ಪದ ಆ ಭಾಷೆಯಲ್ಲಿ ತಿಳಿಯದಿದ್ದರೇ ತನಗೆ ತಿಳಿದ ಭಾಷೆಯಲ್ಲಿಯೇ ಬಹಳ ಜನ ಹೇಳುತ್ತಿರುತ್ತಾರೆ. ಅದೇ ವಿಧವಾಗಿ ಜಿಬ್ರಯೇಲ್ ಅರಬ್ಬೀ ಭಾಷೆಯಲ್ಲೇ ಮುಹಮ್ಮದ್ ಪ್ರವಕ್ತರವರಿಗೆ ಜ್ಞಾನವನ್ನು ಹೇಳುವಾಗ, ದೇವರು ಎಂದು ಹೇಳಬೇಕಾಗಿ ಬಂದಾಗ ತನಗೆ ಪೂರ್ವವೇ ತಿಳಿದ ಅಲ್ಲಾಹ್ ಪದವನ್ನೇ ಹೇಳಿದ್ದಾನೆ. ಅಲ್ಲಾಹ್ ಅರಬ್ಬೀ ಭಾಷೆ ಪದವೇ ಅಲ್ಲ. ಅದು ಆಕಾಶದಲ್ಲಿ ಜಿಬ್ರಯೇಲ್ ಕೇಳಿಸಿಕೊಂಡ ಸ್ವಚ್ಛವಾದ ತೆಲುಗು ಭಾಷೆ. ತೆಲುಗು ಭಾಷೆ ಪೂರ್ವದಲ್ಲಿ ತಯಾರಾದಾಗ ಭಾವನೆಗು, ದೃಶ್ಯಕ್ಕು ಸರಿಪಡುವ ಪದವನ್ನೇ ತೆಲುಗಿನಲ್ಲಿ ಬಳಸುವುದು ನಡೆದಿದೆ. ಭಾವನೆಗೆ ತಕ್ಕ ಪದಗಳನ್ನು ಹೊಂದಿರುವ ಭಾಷೆ ತೆಲುಗು ಭಾಷೆ. ಭಾವನೆಗು ಇಲ್ಲವೆ ದೃಶ್ಯಕ್ಕು ಪ್ರತ್ಯಕ್ಷ ಶಬ್ದವಾಗಿರುವ ಏಕೈಕ ಭಾಷೆ ತೆಲುಗು ಭಾಷೆ. ಪ್ರಪಂಚದಲ್ಲಿ ಮೊದಲು ತಯಾರಾಗಿರುವುದು, ಪ್ರಪಂಚದಲ್ಲಿ ಭಾವನೆಯಿಂದ ಕೂಡಿಕೊಂಡ ಶಬ್ದವಾಗಿ ಇರುವುದು ತೆಲುಗು ಭಾಷೆ ಹೊರತು ಮತ್ಯಾವ ಇತರೆ ಭಾಷೆ ಇಲ್ಲವೆಂದು ಹೇಳಬಹುದು. ಹುಡುಕಲ್ಪಡುವವನು ದೇವರು ಎಂದು ದೇವರನ್ನು ಪ್ರತ್ಯಕ್ಷ ಭಾವನೆಯಿಂದ ಹುಡುಕಲ್ಪಡುವವನು ದೇವರು ಎಂದು ದೇವರ ವಿಧಾನವನ್ನು ಪ್ರತ್ಯಕ್ಷವಾಗಿ ಕಾಣಿಸುವ ಭಾವನೆಯನ್ನು ಜೋಡಿಸಿ ಹೇಳಿದ ಭಾಷೆ ತೆಲುಗು ಭಾಷೆ.

ಹಾಗೆಯೇ ಅಲ್ಲಾಹ್ ಎನ್ನುವ ತೆಲುಗು ಪದದಲ್ಲಿ ಅರ್ಥದಿಂದ ಕೂಡಿಕೊಂಡ ದೇವರ ವಿಧಾನವನ್ನು ಪ್ರತ್ಯಕ್ಷವಾಗಿ ತಿಳಿಸುವಂತೆ ಇದೆ. **ಅಲ್ಲಾಹ್** ಎನ್ನುವ ಪದವನ್ನು ಬೇರ್ಪಡಿಸಿ ನೋಡಿದರೆ **ಅ+ಲ್ಲಾಹ್=ಅಲ್ಲಾಹ್** ಎಂದು ಹೇಳಬಹುದು. ಆದರೇ ಈ ಪದವನ್ನು **"ಲ್ಲಾಹ್"** ಎಂದರೇ ಅಂತ್ಯ, ಹದ್ದು, ಎಲ್ಲೆಗಳು ಎಂದು ಅರ್ಥವಿದೆ. **"ಅ"** ಎಂದು ಹೇಳುವುದರಲ್ಲಿ ಅಲ್ಲ, ಇಲ್ಲ ಎನ್ನುವ ಅರ್ಥವನ್ನು ಹೇಳಬಹುದು. **ಅಲ್ಲಾಹ್ = ಅಂತ್ಯವಿಲ್ಲದವನೆಂದು,**

**ಹದ್ದು ಇಲ್ಲದವನೆಂದು, ಎಲ್ಲೆಗಳು ಇಲ್ಲದವನೆಂದು** ಹೇಳಬಹುದು. ದೇವರು ವಾಸ್ತವವಾಗಿ ಅಂತ್ಯ ಸಿಗದವನು. ಯಾವ ಮಾನವನಿಗೂ ತಿಳಿಯದವನಾದ್ದರಿಂದ, ಆ ಭಾವನೆಗೆ ತಕ್ಕ ವಿಧವಾಗಿ ಅಲ್ಲಾಹ್ ಎನ್ನುವ ಪದವನ್ನು ಆ ದಿನ ಜ್ಞಾನಿಗಳು ತಯಾರಿಸಿದ್ದಾರೆ. ಆ ದಿನ ತಯಾರು ಮಾಡಿದ ತೆಲುಗು ಪದಗಳೇ ಸಂಸ್ಕೃತ ಭಾಷೆಯಲ್ಲಿ ಕೂಡ ಪರಮಾತ್ಮ, ಪುರುಷೋತ್ತಮ ಎಂದು ಹೇಳಲ್ಪಟ್ಟಿವೆ. ಪರಮಾತ್ಮ, ಪುರುಷೋತ್ತಮ ಎನ್ನುವ ಎರಡು ಪದಗಳು ಸ್ವಚ್ಛವಾದ ತೆಲುಗು ಭಾಷೆ ಪದಗಳು. ಆ ಎರಡು ಪದಗಳನ್ನು ಸಂಸ್ಕೃತದಲ್ಲಿ ಭಗವದ್ಗೀತೆಯನ್ನು ಬರೆದಾಗ ಉಳಿದ ವಿಷಯವೆಲ್ಲಾ ಸಂಸ್ಕೃತ ಭಾಷೆಯಲ್ಲಿ ಹೇಳಿದ ವ್ಯಾಸನು ದೇವರನ್ನು ಕುರಿತು ಹೇಳಬೇಕಾಗಿ ಬಂದಾಗ ಭಾವನೆಗೆ ತಕ್ಕ ತೆಲುಗು ಭಾಷೆ ಪದಗಳನ್ನೇ ಬಳಸುವುದು ನಡೆದಿದೆ. ಅದೇ ರೀತಿ ಖುರಾನ್‌ನನ್ನು ಅರಬ್ಬೀ ಭಾಷೆಯಲ್ಲಿ ಬರೆದಾಗ ದೇವರು ಎಂದು ಹೇಳಬೇಕಾಗಿ ಬಂದಾಗ ಅರಬ್ಬೀ ಭಾಷೆಯಲ್ಲಿ ಸರಿಯಾದ ಪದವಿಲ್ಲದೇ ಜಿಬ್ರಯೇಲ್ ಹೇಳಿದ ಅಲ್ಲಾಹ್ ಪದವನ್ನೇ ಬಳಸುವುದು ನಡೆದಿದೆ. ಈ ದಿನ ಸಂಸ್ಕೃತದಲ್ಲಿ ಬರೆದಷ್ಟು ಮಾತ್ರಕ್ಕೆ ಪರಮಾತ್ಮ, ಪುರುಷೋತ್ತಮ ಎನ್ನುವ ಪದಗಳು ಎರಡೂ ಸಂಸ್ಕೃತ ಪದಗಳಲ್ಲದೇ ತೆಲುಗುದಲ್ಲಿಯೇ ಅರ್ಥವನ್ನು ಹೇಳುತ್ತಿವೆ. ಹಾಗೆಯೇ ಖುರಾನ್‌ನಲ್ಲಿ ಅರಬ್ಬೀ ಭಾಷೆಯಲ್ಲಿ ಸೇರಿಸಿ ಅಲ್ಲಾಹ್ ಎಂದು ಬರೆದರೂ, ಅದು ಅರಬ್ಬೀ ಪದವಲ್ಲದೇ ತೆಲುಗುದಲ್ಲಿಯೇ ದೇವರು ಅಂತ್ಯವಿಲ್ಲದವನೆಂದು ಹೇಳುತ್ತಿದೆ. ಸಂಸ್ಕೃತದಲ್ಲಿ ಬರೆದ ಪರಮಾತ್ಮ, ಪುರುಷೋತ್ತಮ ಪದಗಳಿಗೆ ತೆಲುಗುದಲ್ಲಿ ಅರ್ಥವಿದೆಯೇ ಹೊರತು ಸಂಸ್ಕೃತದಲ್ಲಿ ಅರ್ಥವಿಲ್ಲ. ಹಾಗೆಯೇ ಅರಬ್ಬೀ ಭಾಷೆಯಲ್ಲಿ ಹೇಳಿದರೂ ಅಲ್ಲಾಹ್ ಎನ್ನುವ ಪದಕ್ಕೆ ತೆಲುಗುದಲ್ಲಿ ಹೊರತುಪಡಿಸಿ ಅರಬ್ಬೀ ಭಾಷೆಯಲ್ಲಿ ಅರ್ಥವಿಲ್ಲ. ಮೊದಲು ಹುಟ್ಟಿದ ತೆಲುಗು ಭಾಷೆಯನ್ನು ನಂತರ ಹುಟ್ಟಿದ ಎಲ್ಲ ಭಾಷೆಗಳು ಬಳಸಿಕೊಂಡಿವೆ. ಅವಶ್ಯಕತೆಗೆ ಬಳಸಿಕೊಂಡ ತೆಲುಗು ಪದಗಳನ್ನು ಸ್ವಲ್ಪ ಕಾಲಕ್ಕೆ ತಮ್ಮ ಭಾಷಾ ಪದಗಳಾಗಿ ಹೇಳಿಕೊಳ್ಳುತ್ತಿವೆ. ಆದರೂ ಆ ಭಾಷೆಯಲ್ಲಿ ಅವುಗಳಿಗೆ ಅರ್ಥವಿಲ್ಲ. ತೆಲುಗು ಭಾಷೆಯಲ್ಲಿಯೇ ತೆಲುಗು ಪದಗಳಿಗೆ ಅರ್ಥಗಳು ಇರುವುದರಿಂದ ಯಾವ ಭಾಷೆಯಲ್ಲಿ ಬೆರೆತುಹೋದರೂ

ತೆಲುಗು ಪದವನ್ನು ಸುಲಭವಾಗಿ ಗುರುತು ಹಿಡಿಯಬಹುದು. ನಾನೇ ಅಲ್ಲ ತೆಲುಗು ಪದಗಳಿಗೆ ಅರ್ಥ ತಿಳಿದ ಯಾರಾದರೂ ತೆಲುಗು ಪದಗಳನ್ನು ಯಾವ ಭಾಷೆಯಲ್ಲಿ ಇದ್ದರೂ ಸುಲಭವಾಗಿ ಗುರುತು ಹಿಡಿಯಬಹುದು. ಈಗ ಚೆನ್ನಾಗಿ ಆಲೋಚಿಸಿ ನೋಡಿರಿ. ಅಲ್ಲಾಹ್ ಎನ್ನುವ ಪದ ತೆಲುಗು ಪದವೋ ಅಲ್ಲವೋ ನೀವೇ ಹೇಳಿರಿ. ತಿಳಿಯದ ವಿಷಯಗಳನ್ನು ತಿಳಿಸುವುದು ನನ್ನ ಕರ್ತವ್ಯ ಆದರೆ, ಅಸತ್ಯ ಹೇಳಬೇಕಾದ ಅವಶ್ಯಕತೆ ನನಗಿಲ್ಲ.

**ಪ್ರಶ್ನೆ :– ಕೆಲವರು ಅಲ್ಲಾಹ್‌ಗೆ (ದೇವರಿಗೆ) ಸಂತಾನ ಇದೆಯೆಂದು ಅನ್ನುತ್ತಿರುತ್ತಾರೆ. ಯೇಸು ದೇವರ ಕುಮಾರನು ಎಂದು ಕೆಲವರು ಕ್ರೈಸ್ತರು ಹೇಳಿದಾಗ ಕೇಳಿದ್ದೇನೆ. ದೇವರಿಗೆ ಗಂಡು ಮಕ್ಕಳಿದ್ದಾರಾ? ಹೆಣ್ಣು ಮಕ್ಕಳಿದ್ದಾರಾ?**

**ಉತ್ತರ :–** ಅಲ್ಲಾಹ್ ಎಂದರೇ ಅಂತ್ಯ ಸಿಗದವನು. ಒಂದು ವೇಳೆ ಕೆಲವರಂದುಕೊಂಡಹಾಗೆ ಆತನಿಗೆ ಕುಮಾರನೇ ಇದ್ದರೇ ದೇವರು ಪರಿಮಿತನಾಗಿ ಹೋದಂತಾಗುತ್ತದೆ. ಆತನು ಅಪರಿಮಿತನು, ಆದ್ದರಿಂದ ಆತನಿಗೆ ಕುಮಾರನು ಇಲ್ಲ. ಯೇಸುನನ್ನು ಕೆಲವರು ದೇವರ ಕುಮಾರನೆಂದು ಹೇಳಿದ ಮಾತು ವಾಸ್ತವವೇ ಆದರೂ ಅವರ ಮಾತು ಸತ್ಯವಲ್ಲವೆಂದು ತಿಳಿಯಬೇಕು. ಬೈಬಲ್‌ನಲ್ಲಿ ತಂದೆ, ಕುಮಾರನು ಎನ್ನುವ ವಾಕ್ಯವಿರುವುದು ನಿಜವೇ. ಆದರೇ ಅದು ಮುತಷಾಬಿಹಾತ್ ವಾಕ್ಯವೆಂದು (ಸೂಕ್ಷ್ಮ ಅರ್ಥದಿಂದ ಕೂಡಿಕೊಂಡ ವಾಕ್ಯವೆಂದು) ಅವರಿಗೆ ತಿಳಿದಿಲ್ಲ. ಬೈಬಲ್‌ನಲ್ಲಿ ಇದ್ದಂತೇ ಅಂತಿಮ ದೈವಗ್ರಂಥ ವಾದ ಖುರಾನ್‌ನಲ್ಲಿ ಸಹ ಸೂಕ್ಷ್ಮ ಅರ್ಥವಿರುವ ವಾಕ್ಯಗಳು ಇವೆ. **ಖುರಾನ್ ಗ್ರಂಥದಲ್ಲಿ ಸೂಕ್ಷ್ಮವಾಕ್ಯಗಳಿವೆಯೆಂದು ಸೂರಾ3 ಆಯತ್ 7ರಲ್ಲಿ ಅಲ್ಲಾಹ್ ಹೇಳಿದ್ದರೂ ಇತ್ತ ಮುಸ್ಲಿಮ್‌ರಾಗಲೀ, ಅತ್ತ ಕ್ರೈಸ್ತರಾಗಲೀ ಅವುಗಳನ್ನು ವಿಶಧೀಕರಿಸಿ ನೋಡದಂತೆ ಅವುಗಳನ್ನು ಬಿಟ್ಟು ಹಾಕುತ್ತಿದ್ದಾರೆ.** ಆದ್ದರಿಂದ ಅವುಗಳಲ್ಲಿನ ನಿಗೂಢಾರ್ಥವು ಮನುಷ್ಯರಿಗೆ ತಿಳಿಯದೆ ಹೋಗಿದೆ. ತಂದೆ, ಕುಮಾರನು ಎಂದು ಇಂಜೀಲ್ ಗ್ರಂಥದಲ್ಲಿ ಹೇಳಿದರೇ ತಂದೆ ಎಂದರೆ ದೇವರು ಎಂದು, ಕುಮಾರನೆಂದರೆ ಯೇಸು ಎಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ.

ಅಲ್ಲಿ ಹೇಳಿದ ವಾಕ್ಯ ಗೂಢಾರ್ಥದಿಂದ ಕೂಡಿಕೊಂಡಿದೆಯೆಂದು, ಮೇಲ್ನೋಟಕ್ಕೆ ಕಾಣಿಸುವ ಭಾವನೆಯನ್ನು ತೆಗೆದುಕೊಳ್ಳಬಾರದೆಂದು ಯಾರೂ ಅಂದುಕೊಂಡಿಲ್ಲ. ಆದ್ದರಿಂದ ದೇವರಿಗೆ ಯೇಸು ಎನ್ನುವ ಒಬ್ಬ ಮಗನಿದ್ದಾನೆಂದು ಕ್ರೈಸ್ತರು ಎಂದುಕೊಳ್ಳುವುದು ನಡೆದಿದೆ. ವಾಸ್ತವಕ್ಕೆ ದೇವರಿಗೆ ಪ್ರತ್ಯೇಕಿಸಿ ಮಗ ಇಲ್ಲ. ಒಂದು ವಿಧವಾಗಿ ಹೇಳಿದರೇ ಅಲ್ಲಾಹ್‌ಯೇ ಸಮಸ್ತ ಜನರಿಗೂ ತಂದೆಯೆಂದೇ ಹೇಳಬಹುದು. ಎಲ್ಲರನ್ನೂ ಆತನೇ ಸೃಷ್ಠಿಸಿದ್ದಾನಾದ್ದರಿಂದ ಆತನನ್ನು ತಂದೆ ಎನ್ನುವುದರಲ್ಲಿ ತಪ್ಪಿಲ್ಲ ಆದರೆ, ಯಾವೊಬ್ಬರಿಗೋ ತಂದೆ ಎಂದು ಹೇಳುವುದು ತಪ್ಪಾಗುತ್ತದೆ. ಆತನು ಸಮಸ್ತ ವಿಶ್ವಕ್ಕೂ ತಂದೆಯೇ. ಆದರೇ ಕಾಣಿಸುವ ತಂದೆಯಂಥವನು ಅಲ್ಲ. ಸೃಷ್ಠಿಸಿದ ಸೃಷ್ಠಿಕರ್ತ ಅಲ್ಲಾಹ್ ಆಗಿರುವುದರಿಂದ ಆತನನ್ನು ಒಂದು ವಿಧವಾಗಿ ತಂದೆಯೆಂದು ಹೇಳಿದರೂ ಆತನಿಗೆ ಒಬ್ಬರಾಗಲೀ, ಇಬ್ಬರಾಗಲೀ ಕುಮಾರರಿದ್ದಾ ರೆಂದು ಹೇಳುವುದು ತಪ್ಪಾಗುತ್ತದೆ. ಈ ವಿಷಯವೇ ಅಂತಿಮ ದೈವ ಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 2, ಆಯತ್ 116 ರಲ್ಲಿ ಹೀಗೆ ಹೇಳಿದ್ದಾರೆ. (2-116) **"ಅಲ್ಲಾಹ್ ಒಬ್ಬ ಕುಮಾರನನ್ನು ಹೊಂದಿದ್ದಾನೆ ಎಂದು ಅನ್ನುತ್ತಾರೆ. ಆತನು ಎಲ್ಲರಿಗೂ ಅತೀತನು. ವಾಸ್ತವಕ್ಕೆ ಭೂಮಿ ಆಕಾಶಗಳಲ್ಲಿ ಇರುವವೆಲ್ಲಾ ಆತನಿಗೆ ಸೇರಿರುವವೇ, ಆತನು ಸೃಷ್ಠಿಸಿರುವವೇ, ಅವೆಲ್ಲವೂ ಆತನಿಗೆ ವಿಧೇಯರಾಗಿ ಇವೆ."** ಖುರಾನ್‌ನಲ್ಲಿನ ಈ ವಾಕ್ಯವನ್ನು ಅನುಸರಿಸಿ ನೋಡಿದರೇ "ದೇವರು ಒಬ್ಬರಿಗೆ ಸಂತಾನವಲ್ಲ, ಆತನಿಗೆ ಒಬ್ಬರು ಸಂತಾನವಾಗಿ ಇಲ್ಲ" ಎನ್ನುವ ವಿಷಯ ಚೆನ್ನಾಗಿ ಅರ್ಥವಾಗಬಲ್ಲದು. ಹಾಗೆ ಒಬ್ಬರಿಗೆ ಆತನು ತಂದೆಯಾದರೆ ಆತನಿಗೆ ಒಬ್ಬ ಹೆಂಡತಿಯೂ ಸಹ ಇರಬೇಕಾಗುತ್ತದೆ. ಹೀಗೆ ಹೆಂಡತಿ, ಗಂಡ ಸಂತಾನವಿದ್ದರೆ ಆತನು ಮನುಷ್ಯರ ಹೋಲಿಕೆಯಾಗಿ ಹೋಗುತ್ತದೆ. ಆತನು ಸಮಸ್ತಕ್ಕೂ ದೇವರು ಆಗಿರುವುದರಿಂದ ಮನುಷ್ಯರ ಹಾಗೆ ತಂದೆಯಲ್ಲ, ಆತನಿಗೆ ಮಗ ಇಲ್ಲ, ಆತನ ಸಂಕಲ್ಪದಿಂದ ಹುಟ್ಟಿದವರು ವಿಶ್ವವೆಲ್ಲಾ ಇದ್ದಾರೆ ಆದರೆ, ಆತನ ವೀರ್ಯ ಬಿಂದುವಿನಿಂದ ಹುಟ್ಟಿದವರು ಯಾರೂ ಇಲ್ಲ. ಆತನು ಆ ವಿಧವಾಗಿ ಯಾರಿಗೂ ಹುಟ್ಟಲಿಲ್ಲ, ಆ ವಿಧವಾಗಿ ತಂದೆಯಲ್ಲ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ

112ನೇ ಸೂರಾದಲ್ಲಿ 3ನೇ ಅಯತ್‌ನಲ್ಲಿ ಹೀಗೆ ಇದೆ ನೋಡಿರಿ. **(112-3) “ಆತನಿಗೆ ಸಂತಾನವಿಲ್ಲ (ಮಕ್ಕಳನ್ನು ಹೆರುವುದಿಲ್ಲ) ಮತ್ತು ಆತನು ಸಹ ಯಾರ ಸಂತಾನವೂ ಅಲ್ಲ. (ಯಾರಿಗೂ ಜನ್ಮಿಸಿದವನಲ್ಲ)”** ಎಂದು ಇದೆ. ಪ್ರತ್ಯೇಕಿಸಿ ಮನುಷ್ಯರಿಗಿದ್ದ ಹಾಗೆ ದೇವರಿಗೆ (ಅಲ್ಲಾಹ್‌ಗೆ) ಸಂತಾನವಿಲ್ಲ. ಹಾಗೆಯೇ ಎಲ್ಲರೂ ಹುಟ್ಟಿದಂತೆ ಆತನು ಯಾರಿಗೂ ಹುಟ್ಟಲಿಲ್ಲ ಎಂದು ಈ ಆಯತ್‌ನಲ್ಲಿ ಪೂರ್ತಿಯಾಗಿ ಅರ್ಥವಾಗಿ ಹೋಗುತ್ತಿದೆ.

**ಪ್ರಶ್ನೆ :– ದೈವ ಗ್ರಂಥವನ್ನು ಓದಿರೆಂದು ನಾವು ಹೇಳಿದರೇ ಅವರು ನಮಗಿಂತ ಭಕ್ತಿ ಹೆಚ್ಚಾಗಿರುವವರಂತೆ ಮಾತನಾಡುತ್ತಿರುವರು. ಮೊದಲು ಅವರದ್ದು ನಿಜವಾದ ಭಕ್ತಿಯೆಂದು ನಾವು ಅಂದುಕೊಂಡಿದ್ದೇವೆ, ನಂತರ ಅವರಿಗೆ ಯಾವ ಮಾತ್ರವೂ ದೇವರಲ್ಲಿ ಭಕ್ತಿ ಇಲ್ಲವೆಂದು ತಿಳಿದಿದೆ. ಅವರು ಭಕ್ತಿ ಇದ್ದಂತೆ ನಟಿಸುತ್ತಿದ್ದಾರೆಂದು ಅರ್ಥವಾಗಿದೆ. ಅವರು ಯಾರನ್ನು ಮೋಸಮಾಡಿದಂತೆ? ದೇವರನ್ನಾ ಇಲ್ಲವೆ ನಮ್ಮನ್ನಾ?**

**ಉತ್ತರ :–** ದೇವರನ್ನು ಯಾರೂ ಮೋಸ ಮಾಡಲಾರರು. ಆದರೇ ದೇವರ ವಿಷಯದಲ್ಲಿ ಭಕ್ತಿ ಇರುವಂತೆ ನಡೆದುಕೊಳ್ಳುವವರು ಎದುರಿಗಿರುವವರನ್ನು ಮೋಸ ಮಾಡುತ್ತಿದ್ದೇವೆಂದು ಅಂದುಕೊಳ್ಳುತ್ತಾರೆ ಹೊರತು, ಅವರು ಎದುರಿಗಿರುವ ವರನ್ನು ಮೋಸ ಮಾಡಲಿಲ್ಲ. ವಾಸ್ತವಕ್ಕೆ ಅವರನ್ನು ಅವರೇ ಮೋಸ ಮಾಡಿಕೊಳ್ಳುತ್ತಿದ್ದಾರೆ ಎಂದು ಹೇಳಬಹುದು. ಈ ವಿಷಯ ಚೆನ್ನಾಗಿ ಅರ್ಥ ವಾಗುವುದಕ್ಕೆ ಒಂದು ನಡೆದ ಸಂಘಟನೆಯನ್ನು ವಿವರಿಸಿಕೊಂಡು ನೋಡೋಣ. ನಮ್ಮ ಸಹಚರರು ನಾವು ಬರೆದ **“ಅಂತಿಮ ದೈವ ಗ್ರಂಥದಲ್ಲಿ ಜ್ಞಾನವಾಕ್ಯಗಳು”** ಎನ್ನುವ ಗ್ರಂಥವನ್ನು ತೆಗೆದುಕೊಂಡು ಪ್ರಚಾರ ನಿಮಿತ್ತ ಹೋಗಿದ್ದಾರೆ. ನಾವು ಬರೆದ 80 ಗ್ರಂಥಗಳಲ್ಲಿ ಅದು ಒಂದು ಗ್ರಂಥ. ಎಲ್ಲ ಗ್ರಂಥಗಳನ್ನು ಪ್ರಚಾರ ಮಾಡುತ್ತಾ ಯಾರು ಯಾವ ಗ್ರಂಥವನ್ನು ಇಷ್ಟಪಡುತ್ತಿದ್ದಾರೋ ಅದನ್ನು ಕುರಿತು ಹೇಳಿ ಆ ಗ್ರಂಥವನ್ನು ಕೊಡುತ್ತಿದ್ದರು. ಅವರ ಪ್ರಚಾರದಲ್ಲಿ ಒಬ್ಬ ಮುಸ್ಲಿಮ್ ಕುಟುಂಬ ಎದುರಾಯಿತು. ಆಗ ನಮ್ಮ

ಸಹಚರರು. ಖುರಾನ್ ಗ್ರಂಥದಲ್ಲಿನ ಜ್ಞಾನವಾಕ್ಯಗಳನ್ನು ಕುರಿತು ಬರೆದ ಗ್ರಂಥವನ್ನು ನಮ್ಮ ಹತ್ತಿರವಿದೆಯೆಂದು ತೋರಿಸಿದ್ದಾರೆ. ಅವರು ಖುರಾನ್ ಗ್ರಂಥವೆಂದರೇ ನಮಗೆ ಇಷ್ಟ ಅಲ್ಲಾಹ್ ಹೇಳಿದ ಆಯತ್‌ಗಳು ನಾವು ಇಷ್ಟದಿಂದ ಓದುತ್ತೇವೆ ಎಂದು ಹೇಳಿರುವುದರಿಂದ ಎಲ್ಲ ಗ್ರಂಥಗಳನ್ನು ಬಿಟ್ಟು ಪ್ರತ್ಯೇಕಿಸಿ **"ಅಂತಿಮ ದೈವ ಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎನ್ನುವ ಗ್ರಂಥವನ್ನು ತೋರಿಸಿದ್ದಾರೆ. ಅವರು ಹೇಳಿದ ಮಾತನ್ನನುಸರಿಸಿ ಅವರು ಮುಸ್ಲಿಮ್‌ರೆಂದು ನಮ್ಮವರು ಗ್ರಹಿಸಿ ಅವರಿಗೆ ಇಷ್ಟವಾದ ಗ್ರಂಥವನ್ನೇ ತೋರಿಸಿದ್ದಾರೆ. ಅವರು ಮುಸ್ಲಿಮ್ ರಾದರೂ ಭಕ್ತಿ ಇರುವವರಂತೆ ನಟಿಸಿ ಮಾತನಾಡಿದ್ದಾರೇ ಹೊರತು, ಅವರಿಗೆ ಅಂತರಂಗದಲ್ಲಿ ನಿಜವಾಗಿ ಭಕ್ತಿ ಇಲ್ಲ.

ಅವರ ಮಾತುಗಳನ್ನು ನಂಬಿದ ನಮ್ಮವರು ಅವರಿಗೆ ಇಷ್ಟವಾದ ಗ್ರಂಥವೆಂದು ಖುರಾನ್ ವಾಕ್ಯಗಳಿರುವ ಗ್ರಂಥವನ್ನು ತೋರಿಸಿದ್ದಾರೆ. ಅವರು ಗ್ರಂಥವನ್ನು ತೆರೆದು ನೋಡಿ ಇದರಲ್ಲಿ ಸೂರಾ ನಂಬರ್, ಆಯತ್ ನಂಬರ್ ಕೊಟ್ಟು ವಾಕ್ಯವನ್ನು ಬರೆದಿದ್ದಾರೆ ಸೂರಾ ಹೆಸರು ಬರೆಯಲಿಲ್ಲವೇ ಎಂದು ಕೇಳಿದ್ದಾರೆ. ಸೂರಾ ಹೆಸರು ಇಲ್ಲದಿರುವುದರಿಂದ ಈ ಗ್ರಂಥ ನಮಗೆ ಬೇಡ ಎಂದು ಹೇಳಿ ಹಿಂದಕ್ಕೆ ಕೊಟ್ಟು ಕಳುಹಿಸುವುದು ನಡೆದಿದೆ. ನಮ್ಮವರು ಬಂದು ಆ ವಿಷಯವೆಲ್ಲಾ ಹೇಳಿ ಸೂರಾ ಹೆಸರು ಏಕೆ ಬರೆಯಲಿಲ್ಲವೆಂದು ನನ್ನನ್ನು ಪ್ರಶ್ನಿಸಿದ್ದಾರೆ. ಆಗ ನಾನು ಅವರಿಗೆ ಸ್ವಲ್ಪ ವಿವರಣೆಯನ್ನು ಕೊಡುವುದು ನಡೆದಿದೆ. ಅದು ಏನೆಂದರೇ! "ಬಹಳ ಹಸಿವುಗೊಂಡ ಭಿಕ್ಷಕನು ನಾಲ್ಕು ಮನೆಗಳನ್ನು ಸುತ್ತಿ ಭಿಕ್ಷೆ ಬೇಡಿಕೊಳ್ಳಬೇಕೆಂದುಕೊಳ್ಳುವುದು ಸಹಜವೇ. ಕೆಲವು ಮನೆಗಳ ಹತ್ತಿರ ಹೋಗಿ ಅನ್ನ ಕೇಳಿದರೂ ಭಿಕ್ಷಕನಿಗೆ ಅವರು ಅನ್ನ ಇಡಲಿಲ್ಲ. ತಾಳ್ಮೆಯಿಂದ ಇನ್ನೂ ಕೆಲವು ಮನೆಗಳು ತಿರುಗಿದನು. ಆಗ ಒಂದು ಮನೆಯವರು ವಿಸ್ತರಿ ಎಲೆಯ ತುಂಬಾ ಪಲ್ಯಗಳೊಂದಿಗೆ ಅನ್ನವನ್ನು ತಂದುಕೊಟ್ಟಿದ್ದಾರೆ. ಅವರು ಕೊಟ್ಟ ಅನ್ನವನ್ನು ತಿಂದರೆ ಅವನ ಹೊಟ್ಟೆ ತುಂಬುತ್ತದೆ. ಬೇರೆ ಮನೆಗೆ ಹೋಗಿ ಅವನು ಅನ್ನವನ್ನು ಕೇಳುವ ಅವಶ್ಯವೇ ಇಲ್ಲ. ಆಗ ಆ

ಭಿಕ್ಷಕನು ಸಂತೋಷದಿಂದ ಅವರು ಕೊಟ್ಟ ಅನ್ನವನ್ನು ತಿಂದು ಹೊಟ್ಟೆ ತುಂಬಿಸಿಕೊಂಡಿದ್ದಾನೆ. ಅವರು ಹೊಟ್ಟೆ ತುಂಬಾ ಅನ್ನವನ್ನು ಇಟ್ಟಿರುವುದರಿಂದ ಅವರನ್ನು ಆಶೀರ್ವದಿಸಿ ಹೋಗಿದ್ದಾನೆ. ಇದು ನಿಜವಾಗಿ ಹಸಿವುಗೊಂಡವನ ವಿಷಯ.

ನಂತರ ಸ್ವಲ್ಪ ಹೊತ್ತಿಗೆ ಆ ಮನೆಗೆ ಮತ್ತೊಬ್ಬ ಭಿಕ್ಷಕನು ಬಂದನು. ಮೊದಲನೆಯವನಂತೆ ಅವನು ಸಹ ಅನ್ನವನ್ನು ಕೇಳಿದ್ದಾನೆ. ಆ ಮನೆಯವರು ಮೊದಲನೆಯವನಿಗೆ ಅನ್ನವಿಟ್ಟಂತೇ ವಿಸ್ತರಿ ಎಲೆಯಲ್ಲಿ ಪಲ್ಯಗಳೊಂದಿಗೆ ಅನ್ನವನ್ನು ಇಟ್ಟಿದ್ದಾರೆ. ಆದರೇ ಆ ಭಿಕ್ಷಕನು ಅನ್ನವನ್ನು ತೆಗೆದುಕೊಳ್ಳದೆ ಆ ಮನೆ ಯಜಮಾನನ ಹೆಸರು, ಆತನು ಏನು ಮಾಡುತ್ತಿರುವುದನ್ನು ಹೇಳಿ ಅನ್ನವನ್ನು ಇಡಬೇಕೆಂದು ಹೇಳಿದನು. ಹಾಗೆ ಹೇಳಿದರೆ ಆತನನ್ನು ಆಶೀರ್ವದಿಸಿ ಹೋಗುತ್ತೇನೆಂದು ಹೇಳಿದ್ದಾನೆ. ಆ ವಿಧವಾಗಿ ಯಾರು ಅನ್ನ ಇಟ್ಟರೂ ಹಾಗೇ ಕೇಳುತ್ತಿದ್ದನು. ಕೆಲವರು ಮನೆ ಯಜಮಾನನ ಹೆಸರು, ಆತನು ಏನು ಮಾಡುತ್ತಿರುವುದು ಹೇಳುತ್ತಿದ್ದರು. ಕೆಲವರು ನಿನಗೆ ಅನ್ನಬೇಕಾ? ನಮ್ಮ ಅಡ್ರಸ್ ಬೇಕಾ? ಎಂದು ಕೇಳಿ ಹೆಸರು ಹೇಳದಂತೆ, ಅನ್ನವನ್ನು ಸಹ ಇಡದಂತೆ ಕಳುಹಿಸುತ್ತಿದ್ದರು. ವಾಸ್ತವವಾಗಿ ಆತನು ಅನ್ನಕ್ಕಾಗಿ ಮನೆಮನೆ ತಿರುಗುವವನಲ್ಲ. ಯಾರಾದರೂ ಅನ್ನವನ್ನು ಇಟ್ಟರೇ ಆಶೀರ್ವಾದ ಎಂದು ನಟಿಸಿ, ಅವರು ಏನು ಮಾಡುತ್ತಿರುವುದು ಗಮನಿಸಿ, ಅವರು ಒಳ್ಳೆಯ ಆದಾಯವಿರುವ ಕೆಲಸ ಮಾಡುವವನಾದರೇ ಅವರ ಮನೆಗೆ ಕಳ್ಳತನಕ್ಕೆ ಹೋಗಿ ಅವರ ಹಣವನ್ನು ದೋಚಿಕೊಳ್ಳುತ್ತಿದ್ದನು. ಹಸಿವಿಗಾಗಿ ಅನ್ನವನ್ನು ಕೇಳುವವನಂತೆ ನಟಿಸುತ್ತಾ, ಮೇಲಾಗಿ ದೊಡ್ಡ ಜ್ಞಾನಿಯ ಹಾಗೆ ಆಶೀರ್ವಧಿಸುತ್ತೇನೆಂದು ಹೇಳುತ್ತಾ ಇತರರನ್ನು ಮೋಸ ಮಾಡುತ್ತಿದ್ದೇನೆಂದು ಅಂದುಕೊಳ್ಳುತ್ತಿದ್ದನು. ಆದರೇ ವಾಸ್ತವವಾಗಿ ತನ್ನನ್ನು ತಾನು ಮೋಸ ಮಾಡಿಕೊಳ್ಳುತ್ತಿದ್ದೇನೆಂದು, ತನ್ನನ್ನು ತಾನು ಇಕ್ಕಟ್ಟಿನಲ್ಲಿ ಸಿಲುಕಿಕೊಳ್ಳುತ್ತಿದ್ದೇನೆಂದು ಅಂದುಕೊಳ್ಳಲಿಲ್ಲ. ಆತನು ಮಾತನಾಡುವ ವಿಧಾನವನ್ನು ಅನುಸರಿಸಿ ಆತನನ್ನು ಭಿಕ್ಷುಕನ ಹಾಗೆ ನಟಿಸುತ್ತಿದ್ದ

ಕಳ್ಳನೆಂದು ಪೊಲೀಸ್‌ರವರು ಗಮನಿಸಿ ಜೈಲಿಗೆ ಕಳುಹಿಸುವುದು ನಡೆದಿದೆ. ಇತರರನ್ನು ಮೋಸಮಾಡುತ್ತಿದ್ದೇನೆಂದು ಅಂದುಕೊಂಡರೂ ಭಿಕ್ಷಕನಂತೆ ನಟಿಸುವವನು ಕೊನೆಗೆ ತನ್ನನ್ನು ತಾನೇ ಮೋಸ ಮಾಡಿಕೊಂಡಂತೆ, ಅದರಿಂದ ಆತನು ಜೈಲು ಪಾಲು ಆದಂತೆ ನಮಗೆ ತಿಳಿದಿದೆ.”

ಜ್ಞಾನವೆನ್ನುವ ಭಿಕ್ಷೆಯನ್ನು ಕೇಳುವ ಜಿಜ್ಞಾಸಿ (ಜ್ಞಾನವನ್ನು ತಿಳಿಯುವವನು) ತನಗೆ ಬೇಕಾದ ಜ್ಞಾನ ಎಲ್ಲಿ ಸಿಕ್ಕಿದರೂ ಸಂತೋಷ ಪಡುತ್ತಾನೆ. ಅಷ್ಟೇ ಹೊರತು ಜ್ಞಾನ ಹೇಳಿದವನ ವಿವರ ಕೇಳುವುದಿಲ್ಲ. ತನಗೆ ಸಿಕ್ಕಿರುವ ಜ್ಞಾನ ಸರಿಯಾಗಿರುವುದಾ! ಅಲ್ಲವಾ! ಎಂದು ನೋಡಿಕೊಳ್ಳುವನು. ಅಷ್ಟೇ ಹೊರತು ಉಳಿದ ವಿಷಯಗಳು ಆತನಿಗೆ ಅನವಶ್ಯಕ. ಜ್ಞಾನ ಪ್ರಚಾರದಲ್ಲಿ ಜಿಜ್ಞಾಸಿಗಳ ಹಾಗೆ ನಟಿಸಿ ಯಾವೋ ನೆಪಗಳನ್ನು ತೋರಿಸಿ ಜ್ಞಾನವನ್ನು ಬೇಡವೆಂದು ಹೇಳುವುದರಿಂದ, ಅವರು ಬುದ್ಧಿವಂತಿಕೆಯಿಂದ ಪ್ರವರ್ತಿಸಿದಂತೆ ಅಂದುಕೊಂಡರೂ, ಅವರು ಅಸಲಾದ ದೇವರ ಜ್ಞಾನವನ್ನು ನಷ್ಟಹೋ ಗುತ್ತಿದ್ದಾರೆ. ತಿಳಿಯುವ ಜ್ಞಾನವೂ ಸಹ ಅವರ ಪ್ರವರ್ತನೆಯಿಂದ ಅವರಿಗೆ ತಿಳಿಯದಂತೆ ಹೋಗುತ್ತಿದೆ. ಅದರಿಂದ ಅವರು ಇತರರನ್ನು ಅಂದರೆ ಜ್ಞಾನ ಪ್ರಚಾರ ಮಾಡಿದವರನ್ನು ಮೋಸ ಮಾಡಿದ್ದೇವೆಂದು ಅಂದುಕೊಂಡರೂ, ನಿಜವಾಗಿ ಅವರನ್ನು ಅವರು ಮೋಸಮಾಡಿಕೊಂಡಂತೇ ಆಗುತ್ತಿದೆ. ಭಿಕ್ಷೆ ಕೇಳುವವನು ಮನೆ ಯಜಮಾನನ ಅಡ್ರಸ್ ಕೇಳಿ ಬುದ್ಧಿವಂತಿಕೆಯಿಂದ ಇತರರನ್ನು ಮೋಸ ಮಾಡಿ ಕಳ್ಳತನ ಮಾಡಬೇಕೆಂದುಕೊಂಡರೂ ಕೊನೆಗೆ ತಾನೇ ಜೈಲುಪಾಲಾಗಿ ಹೋಗಿದ್ದಾನಲ್ಲವೆ!

ಅಲ್ಲಾಹ್ ಎನ್ನುವ ಪದಕ್ಕೆ ತೆಲುಗುನಲ್ಲಿ ಅರ್ಥವನ್ನು ಹೇಳಿದ್ದೇವೆ. ಅದು ಅರಬ್ಬೀ ಪದವೋ, ತೆಲುಗು ಪದವೋ ತಿಳಿಯದಿದ್ದರೂ ಇಲ್ಲಿ ಹೇಳಿದ ಅರ್ಥವು ದೇವರ ವಿಧಾನದಲ್ಲಿ ವಿಶೇಷವಾಗಿರುವುದರಿಂದ ಎಲ್ಲರೂ ಸಮ್ಮತಿಸುವುದಾಗಿ ಇದೆ. ಇದಕ್ಕೂ ಮೊದಲು ದೇವರನ್ನು ಅಲ್ಲಾಹ್ ಎನ್ನುವುದಕ್ಕೆ ಹಿಂದೂಗಳು ಸ್ವಲ್ಪ ನಾಚಿಕೆ ಪಡುತ್ತಿದ್ದರು. ಈಗ ಈ ಅರ್ಥ ತಿಳಿಯುವುದರಿಂದ ಒಬ್ಬ

ಮುಸ್ಲಿಮ್‌ರೇ ಅಲ್ಲದೆ ಉಳಿದ ಎಲ್ಲ ಮತದವರು ಸಹ ದೇವರನ್ನು ಅಲ್ಲಾಯೆಂದು ಸಂದರ್ಭಾನುಸಾರ ಕರೆಯುವುದರಲ್ಲಿ ಹಿಂಜರಿಯುವುದಿಲ್ಲ. ಅಲ್ಲಾಹ್ ವೊಂದರ ಅರ್ಥತಿಳಿಯುವುದರಿಂದ ಅಲ್ಲಾಹ್ ಎನ್ನುವುದರಲ್ಲಿ ಇರುವ ನಾಚಿಕೆ ಯಾರಿಗೂ ಇಲ್ಲದಂತೆ ಹೋಗಿ ದೇವರನ್ನು ಅವಶ್ಯಕ ಬಂದಾಗ ಅಲ್ಲಾಹ್ ಎಂದೇ ಹೇಳುತ್ತಿರುವರು. ಈ ವಿಧವಾಗಿ ಹೇಳುವುದು ಯಾವುದೋ ಮತ ಪ್ರಚಾರವೆಂದು ಯಾರೂ ಅಂದುಕೊಳ್ಳಬಾರದು. ಸತ್ಯವನ್ನು ಹೇಳುವುದು ಹೊರತಾಗಿ ಇದರಲ್ಲಿ ಏನೂ ಇಲ್ಲ. ಆದ್ದರಿಂದ ಇಲ್ಲಿ ಹೇಳಲ್ಪಡುವ ವಿಷಯಗಳು ಮತಕ್ಕೆ ಸಂಬಂಧಿಸಿರುವವು ಅಲ್ಲವೆಂದು, ಮತಾತೀತವಾದವುಗಳೆಂದು ತಿಳಿಯಬೇಕು. ಮತಾತೀತವಾಗಿ ಇನ್ನೂ ಕೆಲವು ಪದಗಳಿಗೆ ತೆಲುಗುದಲ್ಲಿಯೇ ಅರ್ಥವನ್ನು ತಿಳಿಯುವುದರಿಂದ ತೆಲುಗು ಭಾಷೆ ಓದುಗರು ಸುಲಭವಾಗಿ ಓದಬಲ್ಲರೆಂದು, ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಾರೆಂದು ತಿಳಿಯುತ್ತಿದ್ದೇನೆ.

ತೆಲುಗು ಭಾಷೆ ಪ್ರಪಂಚ ಭಾಷೆಗಳಲ್ಲಿ ಮೊಟ್ಟ ಮೊದಲ ಭಾಷೆಯೆಂದು, ಆದಿಯಲ್ಲಿ ಹುಟ್ಟಿದ ಭಾಷೆ ತೆಲುಗುಭಾಷೆಯೆಂದು ಅನೇಕ ಬಾರಿ ಹೇಳಿಕೊಂಡಿದ್ದೇವೆ. ತೆಲುಗು ಭಾಷೆಯನ್ನು ಆಧಾರಮಾಡಿಕೊಂಡು ಉಳಿದ ಭಾಷೆಗಳು ಹುಟ್ಟಿಕೊಂಡು ಬಂದಿವೆ. ಆದ್ದರಿಂದ ಅನೇಕ ತೆಲುಗು ಪದಗಳು ಉಳಿದ ಭಾಷೆಗಳಲ್ಲಿ ಬೆರೆತು ಹೋಗಿವೆ. ಭಾರತದೇಶಕ್ಕೆ ಹತ್ತಿರದಲ್ಲಿರುವ ದೇಶಗಳಲ್ಲಿ ಆಯಾ ಭಾಷೆಗಳಲ್ಲಿ ತೆಲುಗು ಪದಗಳು ಹೆಚ್ಚಾಗಿ ಕಾಣಿಸುತ್ತಿರುತ್ತವೆ. ನಾನು ಭಾಷಾ ಪಂಡಿತನು ಅಲ್ಲದಿದ್ದರೂ ನಾನು ಅರಬ್ಬೀ ಭಾಷೆಯಲ್ಲಿರುವ ಅಲ್ಲಾಹ್ ಎನ್ನುವ ಪದಕ್ಕೆ ತೆಲುಗಿನಲ್ಲಿ ಅರ್ಥವನ್ನು ಹೇಳಿಕೊಂಡಿದ್ದೇವೆ. ಅದೇ ಜಾಡಿನಲ್ಲಿಯೇ ಮನುಷ್ಯರು ದೈವ ಮಾರ್ಗದಲ್ಲಿ ಹೋಗುವುದಕ್ಕೆ ಬೇಕಾದ ರೀತಿಯಲ್ಲಿ ಕೆಲವು ಮುಖ್ಯವಾದ ಪದಗಳಿಗೆ ಅರ್ಥ ಹೇಳಿಕೊಳ್ಳುವುದಾಗಿದೆ. ಇದು ತೆಲುಗುದವರಾದ ಹಿಂದೂಗಳಿಗೆ ಮಾತ್ರವೇ ಎಂದು, ಮುಸ್ಲಿಮ್‌ರಿಗೆ ಅಲ್ಲವೆಂದು ಸಹ ಹೇಳಬಹುದು.

ಅಂತಿಮ ದೈವಗ್ರಂಥದಲ್ಲಿ **“**ದೇವರ ಮಾರ್ಗದಲ್ಲಿ ಮುಖ್ಯವಾದ ಆರಾಧನೆಗಳು ನಾಲ್ಕು” ಎಂದು ಹೇಳಿದ್ದಾರೆ. ಅವುಗಳಲ್ಲಿ ಎಲ್ಲವುಗಳಿಗಿಂತ ಮುಖ್ಯವಾದುದು, ಮೊದಲನೆಯದು **“ನಮಾಜ್”** ಎಂದು ಹೇಳಿದ್ದಾರೆ. ಎರಡನೆಯದು **“ಜಕಾತ್”** ಎಂದು ಹೇಳಿದ್ದಾರೆ. ಮೂರನೆಯದು **“ರೋಜಾ”** ನಾಲ್ಕನೆಯದು **“ಹಜ್”** ಎಂದು ಹೇಳಿದ್ದಾರೆ. ಈ ನಾಲ್ಕು ಹೆಸರುಗಳಿರುವ ಕಾರ್ಯಗಳು ಮುಸ್ಲಿಮ್‌ರೆಲ್ಲರೂ ತಪ್ಪದೆ ಆಚರಿಸಬೇಕೆಂದು ಹಿರಿಯರು ಹೇಳುತ್ತಿರುವರು. ಇವುಗಳನ್ನು ಅರ್ಥ ಸಹಿತವಾಗಿ ಹೇಳಿಕೊಂಡರೇ ಈ ದಿನ ಮುಸ್ಲೀಮ್‌ರಲ್ಲಿ ಇರುವ ಅರ್ಥದ ಪ್ರಕಾರ ‘ನಮಾಜ್’ ಎಂದರೆ ಪ್ರಾರ್ಥನೆ. ‘ಜಕಾತ್’ ಎಂದರೆ ದೇವರ ಹೆಸರಿನ ಮೇಲೆ ದಾನ ಮಾಡುವುದು, ‘ರೋಜಾ’ ಎಂದರೆ ಪವಿತ್ರ ದಿನಗಳಲ್ಲಿ ಉಪವಾಸವಿರುವುದು. ‘ಹಜ್’ ಎಂದರೆ ಮಕ್ಕಾ ಯಾತ್ರೆ ಮಾಡಿ ಬರುವುದೆಂದು ಹೇಳುತ್ತಿರುತ್ತಾರೆ. ಮುಸ್ಲಿಮ್‌ರೆಲ್ಲರೂ ಈ ವಿಧಾನವನ್ನೇ ತಿಳಿದು, ಈ ವಿಧವಾಗಿಯೇ ತಿಳಿದು, ಈ ವಿಧವಾಗಿಯೇ ಆಚರಿಸುತ್ತಿರುವರು. ಕೆಲವರು ಮುಸ್ಲೀಮ್‌ರು ಆರ್ಥಿಕ ತೊಂದರೆಗಳಿರುವವರು ಹಜ್ ದೈವಯಾತ್ರೆ ಮಾಡಲಾರದೇ ಹೋದರೂ ಉಳಿದ ಮೂರು ವಿಧಾನಗಳನ್ನು ತಪ್ಪದೆ ಆಚರಿಸುತ್ತಿರುವರು. ಪ್ರಾರ್ಥನೆ ಮಾಡುವುದರಲ್ಲಿ ಮುಸ್ಲೀಮ್‌ರೆಲ್ಲರೂ ಉಳಿದ ಮತಗಳಿಗಿಂತ ಮೊದಲಿದ್ದಾರೆ. ಜಕಾತ್ ಮಾಡುವುದರಲ್ಲಿ ಅವರವರ ಸಾಮರ್ಥ್ಯಕ್ಕೆ ತಕ್ಕಹಾಗೆ ಮುಂದಿದ್ದಾರೆ. ಜಕಾತ್ ಮಾಡುವುದರಲ್ಲಿ ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ಮಾಡುತ್ತಿದ್ದಾರೆ. ಪವಿತ್ರ ರಂಜಾನ್ ತಿಂಗಳಲ್ಲಿ ಮುಸ್ಲೀಮ್‌ರೆಲ್ಲರೂ ಉಪವಾಸ ಕಾರ್ಯಕ್ರಮ (ರೋಜಾ) ಮಾಡುವುದನ್ನು ನೋಡುತ್ತಲೇ ಇದ್ದೇವೆ. ಈ ನಾಲ್ಕು ಮುಸ್ಲಿಮ್‌ರಿಗೆ ಮುಖ್ಯವಾದ ಕಾರ್ಯ ಕ್ರಮಗಳಾಗಿ ಹೇಳಲ್ಪಡುತ್ತಿವೆ.

ಆದರೇ ಈ ನಾಲ್ಕು ಕಾರ್ಯಗಳಿಗೆ ತೆಲುಗು ಭಾಷೆಯಲ್ಲಿ ಅರ್ಥಗಳು ಸಹ ಬಹಳ ವಿಶೇಷವಾಗಿಯೇ ಇವೆಯೆಂದು ಹೇಳುತ್ತಿದ್ದೇವೆ. ಈಗ ನಾವು ಪದದೊಳಗಿನ ಅಕ್ಷರಗಳಿಗೆ ತೆಲುಗು ಅರ್ಥವನ್ನು ಹೇಳಿಕೊಳ್ಳುತ್ತಿದ್ದೇವೆ. ಗತದಲ್ಲಿ

ಯಾರೂ ಈ ಪದಗಳಿಗೆ ತೆಲುಗುದಲ್ಲಿ ಅರ್ಥವನ್ನು ಹೇಳದಿರುವುದರಿಂದ ಈಗ ನಾವು ಹೇಳುವ ಅರ್ಥಗಳೆಲ್ಲವೂ ಸತ್ಯವಾದವೇ ಆದರೂ ಹೊಚ್ಚ ಹೊಸದಾಗಿ ಕಾಣಿಸುತ್ತಿರುತ್ತದೆ. ಕೇಳುವವರಿಗೆ ಅನುಮಾನಾಸ್ಪದವಾಗಿರುತ್ತವೆ. ನಾವು ಗಳಿಸಿದ ಅನುಭವವನ್ನನುಸರಿಸಿ ನಾವು ಹೇಳುವುದು ಸತ್ಯವೇಯೆಂದು ತಿಳಿಯಬೇಕು. ಮೇಲಾಗಿ ನನ್ನ ಮಾತುಗಳನ್ನು ಕೇಳುವುದರಿಂದ ಅದು ದೇವರಿಗೆ ವಿರುದ್ಧವಲ್ಲ. ಆದ್ದರಿಂದ ನಾನು ಹೇಳುವ ಮಾತುಗಳನ್ನು ಕೇಳಿರಿ.

ನಮಾಜ್, ಜಕಾತ್, ರೋಜಾ, ಹಜ್ ಎನ್ನುವ ನಾಲ್ಕು ಪದಗಳಲ್ಲಿ ಪ್ರತಿಯೊಂದರಲ್ಲಿ **"ಜ"** ಎನ್ನುವ ಶಬ್ದ ಹೊಂದಿದೆ. ನಮಾಜ್, ಜಕಾತ್, ರೋಜಾ, ಹಜ್ ಎನ್ನುವ ಶಬ್ದ ಹುಟ್ಟುವಿಕೆಯನ್ನು ಸೂಚಿಸುತ್ತಿವೆ. 'ಜ' ಎಂದರೆ ಹುಟ್ಟುವುದೆಂದು ಅರ್ಥ. ಅದರ ಪ್ರಕಾರ ನಮಾಜ್ ಎನ್ನುವ ಪದವನ್ನು ತೆಗೆದುಕೊಂಡು ನೋಡಿದರೇ ನ+ಮ+ಜ ಎನ್ನುವ ಮೂರು ಅಕ್ಷರಗಳು ಇವೆ. 'ನ' ಎಂದರೆ ಇಲ್ಲ, ಅಲ್ಲ ಎಂದು ಅರ್ಥ. 'ಮ' ಎಂದರೆ ನಾನು, ನನಗೆ ಎಂದು ಅರ್ಥ. 'ಜ' ಎಂದರೆ ಹುಟ್ಟುವುದೆಂದು ಅರ್ಥ. ಇದನ್ನು ಸೇರಿಸಿ ನೋಡಿದರೇ "ನನಗೆ ಜನ್ಮಗಳು ಬೇಡ" ಎಂದು ಅರ್ಥವನ್ನು ತಿಳಿಸುವುದನ್ನೇ ನಮಾಜ್ ಎಂದು ಅನ್ನಬಹುದು. ನಮಾಜ್‌ನಲ್ಲಿನ ಫಲಿತಾಂಶ ಮನುಷ್ಯನಿಗೆ ಎರಡನೆ ಜನ್ಮ ಇಲ್ಲದಂತೆ ಅದೇ ಜನ್ಮದಲ್ಲೇ ದೇವರಲ್ಲಿ ಐಕ್ಯವಾಗಿ ಹೋಗುವ ಉದ್ದೇಶ್ಯವನ್ನು ತಿಳಿಸುತ್ತಿದೆ.

ಇನ್ನು ಜಕಾತ್‌ವೊಂದರ ಪದದ ಅರ್ಥವನ್ನು ನೋಡಿದರೇ ಹೀಗೆ ಹೇಳಬಹುದು. ಜ+ಕಾತ್= ಜಕಾತ್. ಜಕಾತ್ ಎರಡು ಶಬ್ದಗಳ ಸೇರುವಿಕೆ. **'ಕಾತ್'** ಎಂದರೆ ಏಕೆ ಎಂದೂ, 'ಜ' ಎಂದರೆ ಹುಟ್ಟುವುದೆಂದೂ, ಒಟ್ಟಾರೆ ಸೇರಿಸಿ ನೋಡಿದರೇ **"ಏಕೆ ಹುಟ್ಟಿದ್ದೇನೆ?"** ಎಂದು ಪ್ರಶ್ನಿಸುವಂತೆ ಮಾಡುತ್ತಿದೆ. ಹಾಗೆ ಪ್ರಶ್ನೆ ಬರುವುದರಿಂದ ತನ್ನ ಹುಟ್ಟುವಿಕೆಗೆ ಒಂದು ಅರ್ಥವಿರಬೇಕೆಂದು, ಅದೇ ದೇವರನ್ನು, ದೇವರ ಜ್ಞಾನ ತಿಳಿಯುವುದೆಂದು ಗ್ರಹಿಸಿ ಅಂದಿನಿಂದ ದೈವಮಾರ್ಗದಲ್ಲಿ ನಡೆಯುವುದಕ್ಕೆ ಅವಕಾಶವಿದೆ. ಜಕಾತ್ ಪದಕ್ಕೆ

ಸರಿಹೋಗುವಂತೆ ದೇವರಿಗೆ ಸೇವೆ ಮಾಡುವ ನಿಮಿತ್ತ ತನಗಿರುವ ಧನದಲ್ಲಿ ಕೆಲವು ದೇವರಿಗೆ ಉಪಯೋಗಿಸುತ್ತಾನೆ. ಹಾಗೆ ಧನ ರೂಪದಲ್ಲಿ, ವಸ್ತು ರೂಪದಲ್ಲಿ ದೇವರ ಸೇವೆ ಮಾಡುವುದನ್ನು 'ಜಕಾತ್' ಎಂದು ಅನ್ನುತ್ತಿರುವರು.

ಪ್ರತಿ ವರ್ಷ ರಂಜಾನ್ ತಿಂಗಳಲ್ಲಿ 30 ದಿನಗಳು ಮುಸ್ಲೀಮ್‌ರೆಲ್ಲರೂ ಪವಿತ್ರ ದಿನಗಳಾಗಿ ಭಾವಿಸಿ ಹಗಲು ಹೊತ್ತು ಉಪವಾಸವಿರುವುದು ನೋಡುತ್ತಿದ್ದೇವೆ. ಹಾಗೆ ಕಳೆಯುವುದನ್ನು ರೋಜಾ ಎಂದು ಅನ್ನುತ್ತಿದ್ದಾರೆ. ರೋಜ ಎಂದು ಎರಡು ಅಕ್ಷರಗಳನ್ನು ಬೇರ್ಪಡಿಸಿ ನೋಡಿದರೆ ರೋ+ಜ ಎಂದು ಬೇರೆಯಾಗುತ್ತವೆ. ಅದರಲ್ಲಿ "ರೋ" ಎನ್ನುವ ಅಕ್ಷರಕ್ಕೆ ವಿವರವನ್ನು ನೋಡಿದರೇ ಪ್ರತಿ ದಿನ ಅಥವಾ ಪ್ರತಿ ಜನ್ಮ ಎಂದು ಅರ್ಥ. "ಜ" ಎಂದರೇ ಹುಟ್ಟುವುದೆಂದು ಅರ್ಥ. ಇದರ ಒಟ್ಟಾರೆ ಅರ್ಥವನ್ನು ಗ್ರಹಿಸಿದರೇ ಬರುವ ಪ್ರತಿ ಜನ್ಮ ಒಳ್ಳೆಯ ಜನ್ಮವನ್ನು ಉಂಟುಮಾಡೆಂದು ಅರ್ಥವಿದೆ. ಮೂವತ್ತು ದಿನಗಳು ಪ್ರತಿ ದಿನ ಉಪವಾಸವಿದ್ದು ದೇವರ ಜ್ಞಾಪಕ ಹೊಂದಿರುವಂತೆ, ಹುಟ್ಟುವ ಪ್ರತಿ ಜನ್ಮ ದೇವರ ಧ್ಯಾಸಹೊಂದಿ ಬದುಕಬೇಕೆಂದು ಕೋರಿಕೊಳ್ಳುವುದೆಂದು ಅರ್ಥ. ಮೂವತ್ತು ದಿನಗಳು ರೋಜಾವನ್ನು ಭಕ್ತಿ ಶ್ರದ್ಧೆಗಳಿಂದ ಆಚರಿಸುವುದರಿಂದ ಅದರ ಫಲಿತವಾಗಿ ಮುಂಬರುವ ಜನ್ಮಗಳು ಒಳ್ಳೆಯದಾಗಿ ದೇವರ ಜ್ಞಾನ ಹೊಂದಿರುತ್ತವೆಂದು ಅರ್ಥವಿದೆ.

ಇನ್ನು ನಾಲ್ಕನೆ ದೈವ ಆಚರಣೆ ಮಕ್ಕಾ ಯಾತ್ರೆಗೆ ಹೋಗುವುದು. ಜೀವನದಲ್ಲಿ ಒಂದು ಬಾರಿಯಾದರೂ ಮಕ್ಕಾ ಯಾತ್ರೆಗೆ ಹೋಗಿ ಬರಬೇಕೆನ್ನುವ ನಿಯಮವಿದೆ. ಹಾಗೆ ಮಕ್ಕಾ ಯಾತ್ರೆಗೆ ಹೋಗಿ ಕಾಬಾ ಗೃಹವನ್ನು ಸಂದರ್ಶಿಸಿ ಬರುವುದನ್ನು "ಹಜ್" ಎಂದು ಅನ್ನುತ್ತಾರೆ. ಹಜ್ ಎಂದರೆ ದೈವ ಜ್ಞಾನವಿರುವ ಜನ್ಮವನ್ನು ಕೊಡುವುದೆಂದು ಅರ್ಥ. ಹ+ಜ್ ಎನ್ನುವ ಎರಡು ಅಕ್ಷರಗಳನ್ನು ಸೇರಿಸಿದರೇ "ಹಜ್" ಎಂದು ಹೇಳಬಹುದು. ಈ ಪದದಲ್ಲಿ ಕೂಡಾ ಪ್ರತ್ಯೇಕಿಸಿ "ಜ" ಎನ್ನುವ ಅಕ್ಷರವಿರುವುದರಿಂದ "ಜ" ಶಬ್ದವು ಜನ್ಮವನ್ನು ಅಥವಾ ಹುಟ್ಟುವಿಕೆಯನ್ನು ಕುರಿತು ತಿಳಿಸುವುದಾಗಿ ಇದೆ. ಹಜ್ ಪದದಲ್ಲಿನ ಪೂರ್ತಿ

ಅರ್ಥವನ್ನು ತೆಗೆದುಕೊಂಡು ನೋಡಿದರೇ 'ಒಳ್ಳೆಯ ಜನ್ಮವನ್ನುಂಟುಮಾಡು' ಎಂದು ಅರ್ಥ.

ಹಿರಿಯರ ಭಾವನೆಯ ಪ್ರಕಾರ ಒಳ್ಳೆಯ ಕೆಲಸ ಮಾಡಿದರೇ ಒಳ್ಳೆಯ ಕರ್ಮ, ಕೆಟ್ಟ ಕೆಲಸ ಮಾಡಿದರೇ ಕೆಟ್ಟ ಕರ್ಮ ಇರುತ್ತದೆ. ಜಕಾತ್ ದಾನ ಮಾಡುವುದು, ಉಪವಾಸವಿರುವುದು, ಯಾತ್ರೆ ಮಾಡುವುದು ಒಳ್ಳೆಯ ಕಾರ್ಯಗಳಾಗುವುದರಿಂದ ಅವುಗಳಿಂದ ಒಳ್ಳೆಯ ಪುಣ್ಯ ಲಭಿಸುವುದೆಂದು ತಿಳಿಯುತ್ತಿದೆ. ಪುಣ್ಯ ಲಭಿಸುವುದರಿಂದ ಮನುಷ್ಯನಿಗೆ ಸ್ವರ್ಗ ಲಭಿಸುತ್ತದೆಂದು ತಿಳಿಯುತ್ತಿದೆ. ಈ ಮೂರು ಕಾರ್ಯಗಳಲ್ಲಿ ಹಜ್, ರೋಜಾ ಎರಡು ಒಳ್ಳೆಯ ಪುಣ್ಯ ಕಾರ್ಯಗಳಾದಾಗ, ಜಕಾತ್ ಒಂದು ಮಾತ್ರ ಎರಡು ವಿಧಗಳಾಗಿ ಇದೆ. ಕೊಟ್ಟಿರುವ ಜಕಾತ್ ಪ್ರಜೆಗಳಿಗೆ ಉಪಯೋಗಪಟ್ಟರೇ ಅದರಿಂದ ಪುಣ್ಯಫಲ ಬರುತ್ತದೆ. ಹಾಗಲ್ಲದೆ ಕೊಟ್ಟಿರುವ ಜಕಾತ್ ನೇರವಾಗಿ ದೇವರ ಸೇವೆಗೆ ಉಪಯೋಗಪಟ್ಟರೇ ಅದರ ಫಲಿತವಾಗಿ ಪುಣ್ಯಬರುವುದಿಲ್ಲ. ಅದು ನಮಾಜ್ ಯೊಂದಿಗೆ ಸಮಾನವಾಗಿಹೋಗುತ್ತದೆ. ನಮಾಜ್ ಮಾಡಿದಾಗ ಮನುಷ್ಯನಿಗೆ ಬರುವ ಫಲಿತವೇ ಅಂತಹ ಜಕಾತ್‌ನಲ್ಲಿ ಇರುತ್ತದೆ. ಆದ್ದರಿಂದ ಜಕಾತ್ ಎರಡು ವಿಧಗಳ ಫಲಿತಾಂಶಗಳನ್ನು ಕೊಡುತ್ತದೆಂದು ಹೇಳಲ್ಪಡುತ್ತಿದೆ.

**ಪ್ರಶ್ನೆ :– ನಮಾಜ್‌ನಲ್ಲಿ ಯಾವ ವಿಧವಾದ ಫಲಿತ ಬರುತ್ತಿದೆಯೋ ನಮಗೆ ತಿಳಿಸಿರೆಂದು ಕೋರುತ್ತಿದ್ದೇವೆ. ನಮಾಜ್ ಮಾಡುವುದರಿಂದ ಪುಣ್ಯ ಬರುತ್ತದೆಂದು, ಪುಣ್ಯದಿಂದ ಸ್ವರ್ಗಲೋಕ ಬರುತ್ತದೆಂದು, ಸ್ವರ್ಗಲೋಕದಲ್ಲಿ ಎಷ್ಟೋ ಸುಖವಾಗಿ ಇರುತ್ತೇವೆಂದು ಮುಸ್ಲಿಮ್‌ರೆಲ್ಲರೂ ಹೇಳುತ್ತಿದ್ದಾರೆ. ಇದಕ್ಕೆ ನೀವೇನನ್ನುತ್ತೀರ?**

**ಉತ್ತರ :–** ನಮಾಜ್, ಜಕಾತ್ ಮಾಡಿದವರನ್ನು ಅಲ್ಲಾಹ್ ಅಂತಿಮದಿನದಲ್ಲಿ ಸ್ವರ್ಗಲೋಕಕ್ಕೆ ಕಳುಹಿಸುವನೆಂದೂ, ನಮಾಜ್, ಜಕಾತ್ ಮಾಡದೇ ಕೆಟ್ಟದಾಗಿ ನಡೆದುಕೊಂಡವರನ್ನು ಅಂತಿಮ ದಿನದಲ್ಲಿ ಎಬ್ಬಿಸಿ ಅಲ್ಲಾಹ್ ಶಿಕ್ಷೆಹಾಕಿ ನರಕಕ್ಕೆ ಕಳುಹಿಸುವನೆಂದು ಮುಸ್ಲಿಮ್‌ರು ಹೇಳುವುದು ನಾವು ಕೇಳಿದ್ದೇವೆ. ನಮಾಜ್

ಜಕಾತ್ ಸಕ್ರಮವಾಗಿ ಮಾಡಿದವರಿಗೆ ಸ್ವರ್ಗಲೋಕದಲ್ಲಿ ಅನೇಕ ಸೌಕರ್ಯಗಳು ಉಂಟಾಗುತ್ತವೆಂದು ಸಹ ಹೇಳಿದಾಗ ಕೇಳಿದ್ದೇವೆ. ಮನುಷ್ಯ ಸ್ವರ್ಗಲೋಕ ಸುಖಗಳಿಗೋಸ್ಕರ ಆಸೆಪಟ್ಟು ನಮಾಜ್, ಜಕಾತ್ ಸಕ್ರಮವಾಗಿ ಮಾಡುತ್ತಾನೆಂದು ಹಾಗೆ ಹೇಳಿದ್ದಾರೋ ಅಥವಾ ನಮಾಜ್, ಜಕಾತ್ ಮಾಡಿದವರಿಗೆ ನಿಜವಾಗಿ ಸ್ವರ್ಗಲೋಕಪ್ರಾಪ್ತಿ ಉಂಟಾಗುತ್ತದೋ ನನಗೆ ತಿಳಿದಿಲ್ಲ ಆದರೆ, ನನ್ನಲ್ಲಿ ತಿಳಿದವನನ್ನು ಕೇಳಿದರೇ ಆತನು ಹೀಗೆ ಹೇಳುತ್ತಿದ್ದಾನೆ. "ನಮಾಜ್"ನ್ನು ನೀವು ಪ್ರತಿ ದಿನ ಮಾಡುತ್ತಿದ್ದೀರ ಅಲ್ಲವೆ! ನಮಾಜ್‌ನಲ್ಲಿ ಯಾವುದೋ ಒಂದು ವಾಕ್ಯವನ್ನು ಹೇಳುತ್ತಾ ನಮಾಜ್ ಮಾಡುತ್ತಿದ್ದಾರೆ. ಪ್ರತಿ ನಮಾಜ್‌ನಲ್ಲಿ ಕಲ್ಮಾ ಎನ್ನುವ ಮಂತ್ರವನ್ನು ಅಥವಾ ದೈವ ಪ್ರಾರ್ಥನೆಯನ್ನು ಹೇಳುತ್ತಿದ್ದಾರೆ. ಹಾಗೆ ಒಂದು ಪದ್ಧತಿಯನ್ನು ಅನುಸರಿಸಿ ಎಲ್ಲರೂ ನಮಾಜ್ ಮಾಡುವುದು ನಡೆಯುತ್ತಿದೆ.

ಇನ್ನೂ ವಿವರವಾಗಿ ಹೇಳಿದರೇ ಖುರಾನ್‌ನಲ್ಲಿನ ಮೊದಲ ಸೂರಾ ಆದ "ಅಲ್ ಫಾತಿಹಾ"ನಲ್ಲಿನ ಏಳು ಆಯತ್‌ಗಳನ್ನು ಓದದೇ ಅದು ನಮಾಜ್ ಎನಿಸಿಕೊಳ್ಳುವುದಿಲ್ಲ ಎಂದು ಹಿರಿಯರ ವಾದನೆ. ಫಾತಿಹಾ ಸೂರಾದಲ್ಲಿನ ಏಳು ವಾಕ್ಯಗಳು ಪೂರ್ತಿ ಆಗದೇ ನಮಾಜ್ ಪೂರ್ತಿ ಆಗುವುದಿಲ್ಲವೆಂದು ಬಹಳ ಜನ ಹೇಳಿದಾಗ ಕೇಳಿದ್ದೇವೆ. ಇಲ್ಲಿ ಮನುಷ್ಯ ನಡೆಯುತ್ತಿರುವ ಒಳ್ಳೆಯ ದಾರಿಯಿಂದ ಇನ್ನೂ ಒಳ್ಳೆಯ ದಾರಿಯೊಳಗೆ ಹೋಗುವುದಕ್ಕೆ ಪ್ರಯತ್ನಿಸಬೇಕು. ಒಂದು ಧರ್ಮ ಸಂದೇಹ ಏರ್ಪಟ್ಟಾಗ ಧರ್ಮಗಳಿಗೆ ಸಂಬಂಧಿಸಿದ ಗ್ರಂಥಗಳನ್ನೇ ನೋಡಬೇಕು. ಅಂತಿಮದೈವ ಗ್ರಂಥ ಖುರಾನ್ ತನಗಿಂತ ಮೊದಲು ಬಂದಿರುವ ದೈವ ಗ್ರಂಥಗಳನ್ನು ಅನುಸರಿಸಿಯೇ ಇದೆಯೆಂದು ಇದನ್ನು ಕುರಿತು ಖುರಾನ್ ಗ್ರಂಥದಲ್ಲಿ ಸೂರಾ5, ಆಯತ್ 48ರಲ್ಲಿ ಇದೆ **(5-48) "ನಾವು ನಿನ್ನ ಕಡೆಗೆ ಈ ಗ್ರಂಥವನ್ನು ಸತ್ಯ ಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ಧೃಢೀಕರಿಸುತ್ತಿದೆ. ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಅವರ (ಮನುಷ್ಯರ) ಮನೋ ಇಚ್ಛೆಗಳನ್ನನುಸರಿಸಬೇಡ."**

ತೌರಾತು ಗ್ರಂಥದಲ್ಲಿ **"ತಪಸ್ಸಿಗಿಂತ ಮಿಗಿಲಾದದ್ದು ಯೋಗ"** ಎಂದು ಆತ್ಮ ಸಂಯಮ ಯೋಗ ಎನ್ನುವ ಅಧ್ಯಾಯದಲ್ಲಿ ಹೇಳಿದ್ದಾರೆ. ಹಾಗೆಯೇ ಇಂಜೀಲು ಗ್ರಂಥದಲ್ಲಿ ಮತ್ತಾಯ ಸುವಾರ್ತೆ **ಆರನೆ** ಅಧ್ಯಾಯ **ಐದನೆ** ವಚನದಲ್ಲಿ **(6–5) "ರಹಸ್ಯ ಪ್ರಾರ್ಥನೆ"**ಎಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಖುರಾನ್ ಗ್ರಂಥದಲ್ಲಿ ಸೂರಾ 4, ಆಯತ್ 103ರಲ್ಲಿ **"ನಮಾಜ್ ನಂತರ ಅಲ್ಲಾನನ್ನು ಸ್ಮರಿಸುತ್ತಾ ಇರಿ"** ಎಂದು ತಿಳಿಸುತ್ತಾ **"ನಮಾಜ್ ವಿಶ್ವಾಸಿಗಳಿಗೋಸ್ಕರ ವಿಧಿಯಾಗಿ ಮಾಡಲಾಗಿರುವುದೆಂದು"** ಹೇಳಿದ್ದಾರೆ. ಅದಕ್ಕೆ ವಿವರವಾಗಿ ನೋಡಿದರೇ ಭಯವಿರುವ ಸ್ಥಿತಿಯಲ್ಲಿ ನಿರ್ಧಾರಿತ ಸಮಯಗಳಲ್ಲಿ ಮಾಡಲಾಗುವ ನಮಾಜ್ ಒಂದು ವಿಧವಾಗಿ ಕುಡಿತಗೊಳಿಸಿದ ನಮಾಜ್‌ಯೇ ಎಂದು ಕೆಲವರು ಮುಸ್ಲಿಮ್ ಹಿರಿಯರು ಹೇಳಿದ್ದಾರೆ. ಇನ್ನೂ ಕೆಲವರು ಅಲ್ಲಾಹ್ ಜ್ಞಾನವನ್ನು ಚೆನ್ನಾಗಿ ತಿಳಿದವರು "ನಮಾಜ್, ಜಕಾತ್, ರೋಜಾ, ಹಜ್‌ಳಂತಹ ಕ್ರಿಯೆಗಳು ಮಾತ್ರವೇ ಆರಾಧನೆಗಳು ಅಲ್ಲ. ಒಂದಾನೊಂದು ಪ್ರತ್ಯೇಕ ಅಸ್ತಿತ್ವದ ಎದುರು ಅಲ್ಲಾಹ್‌ನ್ನು ಅಭ್ಯರ್ಥಿಸಿಕೊಳ್ಳುವುದೇ ನಿಜವಾದ ಆರಾಧನೆಯಾಗುತ್ತದೆ" ಎಂದು ಸಹ ಹೇಳಿದ್ದಾರೆ. ಈ ವಿಧವಾಗಿ ಮೂರು ಗ್ರಂಥಗಳನ್ನು ನೋಡಿದ ನಂತರ ನಮಾಜ್ ಮಾಡುವುದು ವಿಶ್ವಾಸಿಗಳಲ್ಲಿ ಒಂದು ನಿಯಮ ನಿಬಂದನೆ ಏರ್ಪಡಿಸುವುದಕ್ಕೇಯೆಂದು, ಅಸಲಾದ ದೇವರ ಆರಾಧನೆಗೆ ಸಮಯ ನಿಯಮ ಇಲ್ಲವೆಂದು, ಅದು ಮನುಷ್ಯನ ಮನೋಭಾವನೆಗೆ ಅಲ್ಲಾಹ್ ಮೇಲೆ ಅಂಟಿಕೊಂಡಿರುವ ಭಕ್ತಿ ಭಾವವೆಂದೂ, ಅದಕ್ಕೆ ಸಮಯವೆನ್ನುವುದು ಇಲ್ಲವೆಂದು ಹೇಳಿದ್ದಾರೆ. ಆದ್ದರಿಂದ ಮಜೀದ್‌ನಲ್ಲಿ ನಮಾಜ್ ಮುಗಿದ ನಂತರ ಮನಸ್ಸನ್ನು ಅಲ್ಲಾಹ್ ಮೇಲೆ ಲಗ್ನಮಾಡಿ ಇರಿಸಿರೆಂದು ಮುಸ್ಲಿಮ್ ಹಿರಿಯರು ಹೇಳಿರುವಾಗ, ಆಗಲೂ ಸಹ ಫಾತಿಹಾ ಸೂರಾದಲ್ಲಿನ ಏಳು ಆಯತ್‌ಗಳನ್ನೇ ಓದಬೇಕೆಂದು ಕೆಲವರಂದುಕೊಂಡಿದ್ದಾರೆ. ಇಮಾಂ ಹೇಳುವ ಖುರಾನ್ ಪಠನ ಮಾಡುವುದರಲ್ಲಿ ಗಮನವಿಟ್ಟುಕೊಳ್ಳಬೇಕೆಂದು ಕೆಲವರಂದುಕೊಂಡಿದ್ದಾರೆ. ವಾಸ್ತವಕ್ಕೆ ಈ ಎರಡು ಸರಿಯಾದ ವಿಧಾನವಲ್ಲವೆಂದು ನಮಾಜ್‌ನ್ನು ವಿಧಿಯಾಗಿ ಮಾಡಿದ ನಂತರ ಮನೆಯಲ್ಲಾಗಲೀ ಹೊರಗಾಗಲೀ, ರಾತ್ರಿಯಾಗಲೀ, ಹಗಲಾಗಲೀ, ಎಲ್ಲಾದರೂ,

ಯಾವ ಸಮಯದಲ್ಲಾದರೂ ಅಲ್ಲಾಹ್‌ನ್ನು ಸ್ಮರಿಸಿಕೊಳ್ಳುವುದು ನಿಜವಾದ ಅಭ್ಯರ್ಥನೆ, ನಿಜವಾದ ಪ್ರಾರ್ಥನೆ ಆಗುತ್ತದೆ.

**ಪ್ರಶ್ನೆ :– ಮುಸ್ಲಿಮ್‌ರು ಪ್ರಾರ್ಥನಾ ಮಂದಿರಗಳಲ್ಲಿ ಮಾಡುವ ನಮಾಜ್ ದೇವರ ಆರಾಧನೆ ಅಲ್ಲವೆನ್ನುತ್ತೀರಾ?**

**ಉತ್ತರ :–** ನಮಾಜ್ ಎಂದರೆ ಪ್ರಾರ್ಥನೆ ಎಂದು ಅರ್ಥ. ಪ್ರಾರ್ಥನೆ ದೇವರ ಆರಾಧನೆಯೇ ಆಗುತ್ತದೆ. ಆದರೇ ನಮಾಜ್ ಒಂದು ಮಂತ್ರ (ಮಹಿಮೆ ಇರುವ ವಾಕ್ಯ)ದಿಂದ ಕೂಡಿಕೊಂಡಿದೆ. ದೇವರು ನಿಯಮ ನಿಬದ್ಧತೆ ಇಲ್ಲದವನು, ಆದ್ದರಿಂದ ಆತನನ್ನು ನಿಯಮಿತ ಸಮಯದಲ್ಲಿ ಮಾಡುವ ನಮಾಜ್‌ಗೆ ಅಂಕಿತ ಮಾಡಬಾರದು. ಆದ್ದರಿಂದ ಸಮಯಗಳಲ್ಲಿ ಕಡಿತಗೊಳಸಿದ ನಮಾಜ್ ಎಂದು ಕೆಲವರು ಹಿರಿಯರು ಹೇಳಿದ್ದಾರೆ. ವಿಶ್ವಾಸಿಗಳಿಗೋಸ್ಕರ ನಿಯಮ ನಿರ್ಬಂದನೆ ಯಿಂದ ಕೂಡಿಕೊಂಡ ನಮಾಜ್ ಎಲ್ಲರೂ ವಿಧಿಯಾಗಿ ಮಾಡಬೇಕಾಗಿರುವಾಗ, ನಿಯಮ ನಿಬಂದನೆ ಇಲ್ಲದ ಏಕಾಂತ ಪ್ರಾರ್ಥನೆ ಮನಸ್ಸಿನಿಂದ ಮಾಡಬೇಕಾಗಿದೆ ಯೆಂದು, ಅದು ನಮಾಜ್ ಮುಗಿದ ನಂತರ ಎಲ್ಲವೇಳೆಯಲ್ಲಿ ಮಾಡಬಹುದೆಂದು ಹೇಳಿದ್ದಾರೆ. ಕಲ್ಮಾದಿಂದ ಕೂಡಿಕೊಂಡ ನಮಾಜ್ ನಂತರ ಕಲ್ಮಾ ಇಲ್ಲದ ಮತ್ತೊಂದು ಪ್ರಾರ್ಥನೆಯೇ ನಿಜವಾದ ನಮಾಜ್‌ಆಗಿ ಮುಸ್ಲಿಮ್ ಹಿರಿಯರು ಹೇಳಿದ್ದಾರೆ.

ಧರ್ಮಸಮ್ಮತವಾದ ಅಲ್ಲಾ ವಿಷಯಗಳನ್ನು ಒಬ್ಬರಿಗೊಬ್ಬರು ಹೇಳಿಕೊಂಡು ದೈವ ಮಾರ್ಗದಲ್ಲಿ ಮುಂದಕ್ಕೆ ಹೋಗುವುದು ತಪ್ಪು ಅಲ್ಲ. ಅಲ್ಲಾ ಸ್ವತಃವಾಗಿ ವಿಶ್ವಾಸಿಗಳನ್ನು ಉದ್ದೇಶಿಸಿ ಸತ್ಕಾರ್ಯ ಮತ್ತು ದೈವಭಕ್ತಿಗೆ ಸಂಬಂಧಿಸಿದ ವಿಷಯಗಳಲ್ಲಿ ಒಬ್ಬರಿಗೊಬ್ಬರು ಸಹಕರಿಸಿಕೊಳ್ಳಿರೆಂದು ಸುರಾ ಐದರಲ್ಲಿ ಆಯತ್ ಎರಡರಲ್ಲಿ ಹೇಳಿದ್ದಾನೆ. ಆದ್ದರಿಂದ ದೈವ ಮಾರ್ಗದಲ್ಲಿ ಮುಂದಕ್ಕೆ ಹೋಗುವುದಕ್ಕೆ ಸಮಯಾನುಕೂಲವಾಗಿ ಮಾಡುವ ನಮಾಜ್‌ಗಿಂತ, ಸಮಯ ನಿರ್ಣಯವಿಲ್ಲದ ಎಲ್ಲ ವೇಳೆಯಲ್ಲೂ ಮಾಡುವ ನಮಾಜ್ ಅಸಲಾದ ನಮಾಜ್ ಎಂದು ಹೇಳುತ್ತಿದ್ದೇವೆ. ದೈವದ (ಅಲ್ಲಾಹ್) ಮೇಲೆ ವಿಶ್ವಾಸ

ಇರುವವರು ಸಾಧಾರಣ ನಮಾಜ್‌ನ್ನು ನಿರ್ಣಿತ ಸಮಯಗಳಲ್ಲಿ ಮಾಡುತ್ತಾ, ಅಸಾಧಾರಣ ನಮಾಜ್‌ನ್ನು ಮನೋಭಾವನೆಯಿಂದ ಯಾವ ಮಂತ್ರವಾಗಲೀ ಯಾವ ವಾಕ್ಯವಾಗಲೀ ಇಲ್ಲದಂತೆ ಮಾಡಬೇಕು. ಹಾಗೆ ಮಾಡುವುದರಿಂದ ಮೊದಲ ನಮಾಜ್‌ಗಿಂತ ಎರಡನೆ ನಮಾಜ್‌ಗೇ ಅಲ್ಲಾಹ್ ಪ್ರಾಧಾನ್ಯತೆ ಕೊಡುತ್ತಾನೆ.

ನಿರ್ಣೀತ ಸಮಯದಲ್ಲಿ ಮಾಡುವ ನಮಾಜ್ ತಪಸ್ಸು ಕೆಳಗೆ ಜಮಕಟ್ಟಲಾಗುತ್ತದೆ. ನಿರ್ಣಿತ ಸಮಯವಿಲ್ಲದೆ ಎಲ್ಲವೇಳೆಯಲ್ಲೂ ಮಾಡುವ ನಮಾಜ್ ಯೋಗದ ಕೆಳಗೆ ಲೆಕ್ಕಿಸಲ್ಪಡುತ್ತದೆ. ಭಗವದ್ಗೀತೆ (ತೌರಾತ್) ಗ್ರಂಥದಲ್ಲಿ ಹೇಳಲ್ಪಟ್ಟಂತೆ ತಪಸ್ಸಿಗಿಂತ ಅಧಿಕವಾಗಿರುವುದು ಯೋಗ ಆಗಿರುವುದರಿಂದ ಎರಡನೆ ನಮಾಜ್‌ಗೇ ದೇವರು ಪ್ರಾಧಾನ್ಯತೆ ಕೊಡುವುದರಿಂದ ಎರಡನೆ ನಮಾಜ್‌ದಿಂದ ಪರಲೋಕ ಲಭಿಸುತ್ತದೆ. ಮೊದಲ ನಮಾಜ್‌ದಿಂದ ತಪೋ ಫಲಿತವಾದ ಪುಣ್ಯ ಲಭಿಸಿ, ಅದರಿಂದ ಸ್ವರ್ಗ ಲಭಿಸುತ್ತದೆ. ನಮಾಜ್ ದೈವ ಪ್ರಾರ್ಥನೆಯೇ ಆದರೂ ಎರಡು ವಿಧಗಳ ಫಲಿತಗಳನ್ನು ಕೊಡುತ್ತಿದೆ. ಒಂದು ಸ್ವರ್ಗವನ್ನು ಸೇರಿಸಿದಾಗ, ಎರಡನೆಯದು ದೇವರ ಹತ್ತಿರಕ್ಕೆ ಸೇರಿಸುತ್ತಿದೆ. ಸ್ವರ್ಗಕ್ಕೂ, ಪರಲೋಕಕ್ಕೂ ಎಷ್ಟೋ ವ್ಯತ್ಯಾಸವಿದೆ. ಬಹಳ ಜನ ಮುಸ್ಲಿಮ್‌ರಿಗೆ ಸ್ವರ್ಗವನ್ನು ಕುರಿತು, ಅದರಲ್ಲಿನ ಸುಖಗಳನ್ನು ಕುರಿತು ತಿಳಿಯುತ್ತದೆ ಆದರೆ, ಪರಲೋಕವನ್ನು ಕುರಿತು ಅದರಲ್ಲಿನ ದೇವರನ್ನು ಕುರಿತು ತಿಳಿದಿಲ್ಲ. ನಾವು ಸ್ವರ್ಗಕ್ಕಿಂತ ಹೆಚ್ಚಾಗಿ ಪರಲೋಕಕ್ಕೆ ಬೆಲೆಯನ್ನು ಕೊಡುತ್ತಿದ್ದೇವೆ ಆದ್ದರಿಂದ ನಿಮ್ಮನ್ನು ಮೊದಲನೆ ವಿಧ ನಮಾಜ್‌ನೊಂದಿಗೆ ಎರಡನೆ ವಿಧ ನಮಾಜ್‌ನ್ನು ಕೂಡಾ ಮಾಡೆಂದಿದ್ದೇನೆ. ನಿನ್ನ ಬುದ್ಧಿಯನ್ನನುಸರಿಸಿ ನೀನು ನಿರ್ಣಯಿಸಿಕೊಳ್ಳ ಬಹುದು ಆದರೆ ಇತರರು ನಿರ್ಣಯಿಸಿ ಹೇಳಬಾರದು. ಯಾರ ಇಷ್ಟತೆಯನ್ನನು ಸರಿಸಿ ಅವರಿಗೆ ದೇವರು ಫಲಿತವನ್ನು ಕೊಡುತ್ತಾನೆ.

**ಪ್ರಶ್ನೆ :– ನೀವು ಜಬೂರ, ತೌರಾತ್, ಇಂಜೀಲ್, ಖುರಾನ್ ಗ್ರಂಥಗಳನ್ನು ಕುರಿತು ಹೇಳುತ್ತಾ ಜಬೂರ ಗ್ರಂಥವಲ್ಲ, ಅದು ಜ್ಞಾನಬೋಧನೆ ಮಾತ್ರವೇಯೆಂದು**

ಹೇಳಿದ್ದೀರ. ಹಾಗೆಯೇ ಇಂಜೀಲ್‌ನ್ನು ಬೈಬಿಲ್ ಗ್ರಂಥವೆಂದು ಹೇಳಿದ್ದೀರ. ತೌರಾತ್‌ನ್ನು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯೆಂದು ಹೇಳಿದ್ದೀರ. ಭಗವದ್ಗೀತೆಯೆನ್ನುವುದು ಐದುಸಾವಿರ ವರ್ಷಗಳ ಪೂರ್ವದಲ್ಲಿ ಕೃಷ್ಣನು ಅರ್ಜುನನಿಗೆ ಹೇಳಿದಾಗ, ಅದನ್ನೇ ವ್ಯಾಸನು ಗ್ರಂಥವಾಗಿ ಬರೆದಿದ್ದಾನೆಂದು ಇದೆ. ಕೃಷ್ಣನು ಬೋಧನೆ ರೂಪದಲ್ಲಿ ಹೇಳಿದಾಗ, ಅದನ್ನೇ ಆದಿಯಲ್ಲಿ ಆಕಾಶವಾಣಿ ಹೇಳಿದೆಯೆಂದು ಸಹ ಹೇಳಿದ್ದಾನೆ. ಆದಿಯಲ್ಲಿ ಆಕಾಶವಾಣಿ ಹೇಳಿದ ಜ್ಞಾನ ಭಗವದ್ಗೀತೆಯೆಂದು ಕೃಷ್ಣನು ಹೇಳಿದ ಮಾತುಗಳನ್ನನುಸರಿಸಿ ಅರ್ಥವಾಗಿದೆ. ಆದರೇ ವಾಣಿ ಮೂಲಕ ಬಂದಿರುವ ಜ್ಞಾನ ಭಗವದ್ಗೀತೆಯೇ ಆದರೂ ಅದು ಕೃಷ್ಣನು ಭಗವಂತನಾಗಿ ಬಂದು ಹೇಳುವುದರಿಂದ ಭಗವದ್ಗೀತೆಯೆಂದು ಹೆಸರು ಬಂದಿದೆ. ಅದಕ್ಕೂ ಮೊದಲು ಅದಕ್ಕೆ ಭಗವದ್ಗೀತೆಯೆನ್ನುವ ಹೆಸರಿಲ್ಲ. ಬೋಧನೆ ರೂಪದಲ್ಲಿರುವ ಆಕಾಶವಾಣಿ ಜ್ಞಾನಕ್ಕೆ "ಜಪರ" ಎನ್ನುವ ಹೆಸರು ಇತ್ತು. ಜಪರ ಎಂದರೇ ಹುಟ್ಟುವಿಕೆಗಿಂತ ಬೇರೆಯಾಗಿರುವುದೆಂದು ನೀವೇ ಹೇಳಿದ್ದೀರ. ಜಪರ ಜ್ಞಾನವೇ ಭಗವದ್ಗೀತೆಯಾಗಿ ಗ್ರಂಥ ರೂಪವಾದಾಗ ಅದು ಹುಟ್ಟಿರುವುದು ಭಾರತದೇಶದಲ್ಲಿ ಹೇಳಿದವನು ಕೃಷ್ಣನು. ಬರೆದಿರುವವನು ವ್ಯಾಸನು ಎಂದು ಎಲ್ಲರಿಗೂ ತಿಳಿದಿದೆ. ಆದರೇ ಎಲ್ಲೋ ಪಶ್ಚಿಮ ದೇಶದಲ್ಲಿರುವ ಮೂಸಾ ಬರೆದ ತೌರಾತ್ ಗ್ರಂಥಕ್ಕು ಭಗವದ್ಗೀತೆಗೂ ನೀವು ಮುಡಿ ಇಟ್ಟು ತೌರಾತ್ ಗ್ರಂಥವೇ ಭಗವದ್ಗೀತೆಯೆಂದು ಅನ್ನುತ್ತಿದ್ದೀರ. ಮೂಸಾ ಪ್ರವಕ್ತ ಮತ್ತು ಆತನ ತೌರಾತ್ ಗ್ರಂಥಕ್ಕೆ ಕೃಷ್ಣನು ಹೇಳಿದ ಮತ್ತು ಭಾರತದೇಶದಲ್ಲಿ ತಯಾರಾದ ಭಗವದ್ಗೀತೆಗೂ ಯಾವ ಸಂಬಂಧವಿಲ್ಲವೆಂದು ಪ್ರತ್ಯಕ್ಷವಾಗಿ ತಿಳಿಯುತ್ತಿರುವಾಗ ನೀವು ಇಲ್ಲದ ವಿಷಯವನ್ನು ಹೇಳಿದರೇ ನಾವು ಹೇಗೆ ನಂಬಬೇಕು? ನೀವು ಅನೇಕ ವಿಷಯಗಳಲ್ಲಿ ಸತ್ಯವನ್ನೇ ಹೇಳಿದ್ದೀರೆಂದು ನಮಗೆ ತಿಳಿದಿದೆ. ನೀವು ಮುಂಬರುವ ಕಾಲದಲ್ಲಿ ಸಹ ಸತ್ಯವನ್ನೇ ಹೇಳುತ್ತೀರೆಂದು ನಂಬುತ್ತಿರುವ ನಮಗೆ ಪೂರ್ತಿ ಕಾಣಿಸುವ ಅಸತ್ಯವನ್ನು ಹೇಳುವುದರಲ್ಲಿ ನಿಮ್ಮ ಉದ್ದೇಶವೇನು?

**ಉತ್ತರ :–** ನನ್ನ ಜೀವನ ಕಾಲವೆಲ್ಲವೂ ನಿಮಗೆ ಸತ್ಯವನ್ನೇ ಹೇಳಬೇಕೆನ್ನುವುದೇ

ನನ್ನ ಕೋರಿಕೆ, ಆದರೇ ನಾನು ಕೋರಿಕೆ ಇರುವವನೇ ಹೊರತು ಅದನ್ನು ಈಡೇರಿಸುವವನು ನಾನಲ್ಲ, ನನ್ನಲ್ಲಿನ ನನ್ನ ಆತ್ಮವೇ ಎಂದು ಹೇಳುತ್ತಿದ್ದೇನೆ. ಶರೀರದಲ್ಲಿ ನಾನು ಸತ್ಯವನ್ನೇ ಹೇಳಬೇಕೆನ್ನುವ ಅಭಿಲಾಷೆ ಹೊಂದಿದ್ದರೂ ಸತ್ಯವನ್ನಾಗಲೀ, ಅಸತ್ಯವನ್ನಾಗಲೀ ಹೇಳುವವನು ಆತ್ಮವೇ. ಪ್ರಪಂಚ ವಿಷಯಗಳಲ್ಲಿ ಅಸತ್ಯವನ್ನು, ಸತ್ಯವನ್ನು ಎರಡು ವಿಧಗಳಲ್ಲಿ ಹೇಳುವ ಆತ್ಮ ದೈವಿಕ ವಿಷಯದಲ್ಲಿ ಸತ್ಯವೇ ಹೇಳುವುದೆಂದು ಸಹ ತಿಳಿದಿದೆ. ಆದ್ದರಿಂದ ಭಗವದ್ಗೀತೆ, ತೌರಾತ್ ಎನ್ನುವ ವಿಷಯಗಳಲ್ಲಿ ಸತ್ಯವನ್ನೇ ಹೇಳುವನೆಂದು ಅಸತ್ಯವನ್ನು ಹೇಳುವುದಿಲ್ಲವೆಂದು ಹೇಳುತ್ತಿದ್ದೇನೆಂದು ಹೇಳಿಸುವವನು ಆತ್ಮವೇ. ಆತ್ಮವೇ ಈ ಮಾತು ಹೇಳುವುದರಿಂದ ನನ್ನಿಂದ ಬರುವ ಮಾತು ನನ್ನದಲ್ಲವೆಂದು, ಆತ್ಮದ್ದೆಂದು, ಅದುವೇ ಸತ್ಯವೆಂದು ತಿಳಿಯಬೇಕು. ನಿಮಗೆ ಪ್ರತ್ಯಕ್ಷವಾಗಿ ಅಸತ್ಯವೇ ಕಾಣಿಸುತ್ತಿದೆಯೆಂದು ಹೇಳಿದ್ದೀರ. ನಿಮಗೆ ಕಾಣಿಸಿರುವುದು ಅಸತ್ಯವಲ್ಲವೆಂದು, ಸತ್ಯವೇಯೆಂದು ತಿಳಿಸುವ ಜವಾಬ್ದಾರಿ ಆತನದ್ದೇ (ಆತ್ಮನದ್ದೇ), ಆದ್ದರಿಂದ ಆತನು ಏನು ಹೇಳುತ್ತಾನೋ ಜಾಗ್ರತೆಯಿಂದ ಕೇಳೋಣ.

ಮಾನವರೊಂದಿಗೆ ಸಹ ಸಮಸ್ತ ಪ್ರಾಣಿ, ವೃಕ್ಷ, ಕ್ರಿಮಿ, ಕೀಟಕ, ಲತಾದಿಗಳನ್ನು ಮತ್ತು ದೇವತೆಗಳನ್ನು ಸೃಷ್ಟಿಸಿದ ಸೃಷ್ಟಿಕರ್ತ, ಎಲ್ಲರನ್ನೂ ಪಾಲಿಸುವ ಗ್ರಹಗಳು, ಉಪಗ್ರಹಗಳು, ಭೂತಗಳು, ಮಹಾಭೂತಗಳನ್ನು, ಉಪಭೂತಗಳನ್ನು ತಯಾರುಮಾಡಿ ಎಲ್ಲರಿಗೂ ಅವಶ್ಯಕವಾದ ತನ್ನ ಜ್ಞಾನವನ್ನು ಮಹಾಭೂತವಾದ ಆಕಾಶವಾಣಿಯಿಂದ ಹೇಳಿಸಿದ್ದಾನೆ. ಹಾಗೆ ಆಕಾಶದ ಮುಖಾಂತರ ಹೇಳಿಸುವುದರಿಂದ ದೇವರ ಪರಿಪಾಲನೆಯಲ್ಲಿ ಪಾಲಕರಾಗಿರುವ ಗ್ರಹಗಳಿಗೂ, ಉಪಗ್ರಹಗಳಿಗೂ, ಭೂತಗಳಿಗೂ, ಉಪಭೂತಗಳಿಗೂ, ಮಹಾಭೂತಗಳಿಗೂ ಮುಂಚಿತವಾಗಿ ತನ್ನ ಜ್ಞಾನವನ್ನು ತಿಳಿಯಬೇಕೆನ್ನುವ ಉದ್ದೇಶದಿಂದ ಹೇಳುವುದು ನಡೆದಿದೆ. ಹಾಗೆ ಹೇಳುವ ಜ್ಞಾನವನ್ನು ಮೊದಲು ಸೂರ್ಯಗ್ರಹ ಕೇಳಿ ಅರ್ಥಮಾಡಿಕೊಂಡು ತನಗೆ ಅರ್ಥವಾದ ಜ್ಞಾನವನ್ನು ಉಳಿದ ಗ್ರಹಗಳಿಗು ಭೂತಗಳಿಗೂ ತಿಳಿಸಿದೆ. ಆ ವಿಧವಾಗಿ ಮೊಟ್ಟಮೊದಲು ದೈವ ಪಾಲಕರಿಗೆ

ಜ್ಞಾನವನ್ನು ತಿಳಿಸುವುದು ನಡೆದಿದೆ. ದೇವರು ಸಮಸ್ತ ಸೃಷ್ಠಿಯನ್ನು ತಯಾರು ಮಾಡಿದ ನಂತರ ಸೃಷ್ಠಿಯೆಲ್ಲವೂ ಸಜೀವಹೊಂದಿರುವುದಕ್ಕೆ ತನ್ನಿಂದ ಸ್ವಲ್ಪ ಅಂಶವನ್ನು ಜೀವಿಯಾಗಿ ತಯಾರಿಸಿ ಎಲ್ಲರೊಳಗೆ ಕಳುಹಿಸುವುದು ನಡೆದಿದೆ. ಅಷ್ಟೇ ಅಲ್ಲದೆ ಜೀವಿಯೊಂದಿಗೆ ಸಹ ಆತನನ್ನು ನಡೆಸುವ ಆತ್ಮನನ್ನು ಸಹ ತನ್ನಿಂದ ಕಳುಹಿಸುವುದು ನಡೆದಿದೆ. ದೇವರು ಒಂದು ಭಾಗ ಜೀವಿಯಾಗಿ, ಒಂದು ಭಾಗ ಆತ್ಮವಾಗಿ ವಿಭಜಿಸಲ್ಪಟ್ಟು ಸಮಸ್ತ ಸೃಷ್ಠಿಗೂ ಜೀವರೂಪವನ್ನು ಕಲ್ಪಿಸಿದ್ದಾನೆ. ಹಾಗೆ ದೇವರು ಮೂರಾಗಿ ಸೀಳಿಹೋಗುವುದರಿಂದ ದೇವರು ದೇವರಾಗಿಯೇ ಇದ್ದು ನಂತರ ಆತ್ಮ, ಜೀವಾತ್ಮ ಎನ್ನುವ ಎರಡು ಭಾಗಗಳಾಗಿದ್ದಾನೆ. ಅದರಿಂದ ಜೀವಾತ್ಮನಿಗೆ ಕ್ಷರನು ಎಂದು, ಆತ್ಮಕ್ಕೆ ಅಕ್ಷರನೆಂದು ಹೇಳಿದ ದೇವರು ತನ್ನನ್ನು ತಾನು ಆ ಇಬ್ಬರ ಪುರುಷರಿಗಿಂತ ಹಿರಿಯನಾಗಿ ಅರ್ಥವಾಗುವಂತೆ ತಿಳಿಸುತ್ತಾ ತನ್ನನ್ನು ಪುರುಷೋತ್ತಮನೆಂದು ಹೇಳಿದ್ದಾರೆ.

ಸೃಷ್ಠಿ ಆದಿಯಲ್ಲಿ ಆಕಾಶವಾಣಿಯಿಂದ ಹೇಳಿದ ಜ್ಞಾನವನ್ನು ಆಕಾಶ ಎನ್ನುವ ಭೂತದಲ್ಲಿರುವ ಆತ್ಮವೇ ಹೇಳಿದೆ. ಯಾವ ಕೆಲಸವನ್ನು ಮಾಡಬೇಕಾಗಿದ್ದರೂ ಅದನ್ನು ಆತ್ಮವೇ ಮಾಡುವಂತೆ ದೇವರು ಮೊದಲೇ ನಿರ್ಣಯಿಸಿದ್ದಾನೆ. ತಾನು ಮಾತ್ರ ಏನೂ ಮಾಡದೇ ಶರೀರದಲ್ಲಿ ಜೀವಾತ್ಮ, ಆತ್ಮಗಳಿಗೆ ಸಾಕ್ಷಿಯಾಗಿ ಇದ್ದಾನೆ. ಶರೀರಗಳಲ್ಲಿ ದೇವರು ಸಾಕ್ಷಿಯಾಗಿ ಇರುವಾಗ, ಆತ್ಮ ಎಲ್ಲ ಕಾರ್ಯಗಳನ್ನು ಮಾಡುವ ಕಾರ್ಯಕರ್ತನಾಗಿ ಇರುವಾಗ, ಜೀವಾತ್ಮ ನಡೆದ ಕೆಲಸಗಳಿಂದ ಬಂದಿರುವ ಫಲಿತವನ್ನು ಎಂದರೆ, ಸುಖದುಃಖಗಳನ್ನು ಅನುಭವಿಸುತ್ತಿರುವನು. ಶರೀರದಲ್ಲಿ ಜೀವಿಯು ಕೈಲಾಗದವನಾಗಿ ಯಾವ ಕಾರ್ಯವನ್ನು ಮಾಡುವುದಿಲ್ಲ. ದೇವರು ಎಲ್ಲಾ ಕೈಲಾದರೂ ತಾನು ಮಾಡದಂತೆ ಸಾಕ್ಷಿಯಾಗಿ ಇರುವನು. ಜೀವಿಯು, ದೇವರು ಇಬ್ಬರು ಯಾವ ಕಾರ್ಯವನ್ನು ಮಾಡದೇ ಹೋದರೂ, ಶರೀರದಲ್ಲಿನ ಆತ್ಮ ಮಾತ್ರ ಸಮಸ್ತ ಕಾರ್ಯಗಳನ್ನು ಮಾಡುತ್ತಿರುತ್ತದೆ. ಸೃಷ್ಠಿ ಆದಿಯಲ್ಲಿ ಆಕಾಶವಾಣಿಯಿಂದ ಬಂದಿರುವ ದೈವ ಜ್ಞಾನವು ಖಗೋಳದಲ್ಲಿನ ಗ್ರಹಗಳಿಗು, ಭೂತಗಳಿಗೂ ಸೇರಿದೆಯೇ ಹೊರತು

ಭೂಮಿ ಮೇಲೆ ಮನುಷ್ಯರಿಗೆ ಮಾತ್ರ ತಿಳಿದಿಲ್ಲ. ದೇವರ ಜ್ಞಾನ ತಿಳಿಯದಿರುವುದರಿಂದ ಮಾಯೆಯಿಂದ ಕಲ್ಪಿಸಲ್ಪಟ್ಟ ಯಜ್ಞಯಾಗಾದಿಗಳು, ವೇದ ಪಠನಗಳು, ದಾನಗಳು ತಪಸ್ಸುಗಳು ದೈವ ಜ್ಞಾನವಾಗಿ ಮನುಷ್ಯರಿಗೆ ತಿಳಿದಾಗ ಮನುಷ್ಯರು ಅವುಗಳನ್ನೇ ದೊಡ್ಡದಾಗಿ ಆಚರಿಸುತ್ತಿದ್ದರು.

ದೈವಜ್ಞಾನ ತಿಳಿಯದಿರುವುದರಿಂದ ಮಾಯೆ ಕಲ್ಪಿಸಿದ ವೇದ, ಯಜ್ಞ, ದಾನ, ತಪಸ್ಸುಗಳನ್ನೇ ದೊಡ್ಡದಾಗಿ ಆಚರಿಸುತ್ತಾ ಅವೇ ದೈವ ಆರಾಧನೆಗಳೆಂದು ತಿಳಿಯುತ್ತಿದ್ದರು. ಆ ವಿಧವಾಗಿ ಕೃತಯುಗ, ತ್ರೇತಾಯುಗ, ದ್ವಾಪರಯುಗ ಕಳೆದುಹೋದಾಗ ಅಲ್ಲಿಯವರೆಗು ಪ್ರಜೆಗಳಿಗೆ ದೇವರ ಜ್ಞಾನ ಗ್ರಂಥರೂಪದಲ್ಲಿ ಇಲ್ಲದಿರುವುದರಿಂದ, ತ್ರೇತಾಯುಗದಲ್ಲಿ ರಾವಣ ಬ್ರಹ್ಮ ದೈವಜ್ಞಾನವನ್ನು ಹೇಳಿದರೂ, ಅದು ಗ್ರಂಥರೂಪ ಆಗದಿರುವುದರಿಂದ ಪ್ರಜೆಗಳಿಗೆ ದೈವ ಜ್ಞಾನವೇ ತಿಳಿಯದಂತೆ ಹೋಗಿದೆ. ದ್ವಾಪರಯುಗದ ಕೊನೆಯಲ್ಲಿ ದೇವರ ಅಂಶ ಕೃಷ್ಣನ ರೂಪದಲ್ಲಿ ಭಗವಂತನಾಗಿ ಬಂದು ದೇವರ ಜ್ಞಾನವನ್ನು ಬೋಧಿಸಬೇಕೆಂದು ಕೊಂಡಿದೆ. ಅಲ್ಲಿಯವರೆಗು ಗ್ರಹಗಳಿಗು, ಭೂತಗಳಿಗು ಪರಿಮಿತವಾದ ದೈವಜ್ಞಾನವೇ ಮನುಷ್ಯರಿಗು ಕೂಡಾ ಅವಶ್ಯಕವೆಂದು ತಿಳಿದ ದೇವರು ತಾನೇ ಭಗವಂತನಾಗಿ ಅವತರಿಸಿ, ಕೃಷ್ಣ ಎನ್ನುವ ಹೆಸರಿನಿಂದ ಭೂಮಿ ಮೇಲೆ ಇದ್ದು ಕೊನೆಗೆ ಮನುಷ್ಯನಿಗೆ ಜ್ಞಾನವನ್ನು ಹೇಳಿ ಅದನ್ನು ಮತ್ತೊಬ್ಬರಿಂದ ಗ್ರಂಥರೂಪವಾಗುವಂತೆ ಮಾಡಿದ್ದಾನೆ. ಆ ವಿಧವಾಗಿ ತಯಾರಾಗಿರುವುದೇ ಭಗವದ್ಗೀತೆ. ಭಗವದ್ಗೀತೆಯನ್ನು ಬರೆದಿರುವುದು ವ್ಯಾಸನು, ಕೇಳಿರುವುದು ಅರ್ಜುನನು, ಹೇಳಿರುವುದು ಕೃಷ್ಣನು. ಭಾರತದೇಶದಲ್ಲಿ ಪ್ರಜೆಗಳಿಗೆ ಜ್ಞಾನವನ್ನು ಕೃಷ್ಣನು ಹೇಳುವುದೇ ಅಲ್ಲದೆ ಅದು ಸ್ಥಿರವಾಗಿ ನಿಲ್ಲುವಂತೆ ಅದನ್ನು ಗ್ರಂಥರೂಪವಾಗಿ ಮಾಡಿದ್ದಾನೆ. ದೈವಜ್ಞಾನ ಮೊಟ್ಟಮೊದಲಬಾರಿ ಗ್ರಂಥರೂಪವಾಗಿರುವುದರಿಂದ ಅದನ್ನು "ಪ್ರಥಮ ದೈವಗ್ರಂಥ" ಎಂದು ಹೇಳುವುದಾಗಿದೆ. ಪ್ರಥಮ ದೈವಗ್ರಂಥವನ್ನು ಕೃಷ್ಣನು ಅರ್ಜುನನಿಗೆ ಹೇಳುವಾಗಲೇ **"ಈ ಜ್ಞಾನವನ್ನು ನಾನು ಸೃಷ್ಠಿ ಆದಿಯಲ್ಲಿ ಸೂರ್ಯನಿಗೆ ಹೇಳಿದ್ದೆನು, ಅದೇ**

**ಜ್ಞಾನವನ್ನೇ ಈಗ ನಿನಗೆ ಹೇಳುತ್ತಿದ್ದೇನೆ"** ಎಂದು ಸಹ ಹೇಳಿದ್ದಾನೆ. ಅದರಿಂದ ಭೂಮಿಮೇಲೆ ಯಾವಾಗ ಜ್ಞಾನ ಹೇಳಲ್ಪಟ್ಟರೂ ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವೇ ಇರುತ್ತದೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಸೃಷ್ಠಿ ಇರುವವರೆಗು ದೇವರು ಒಬ್ಬನೇ, ಜ್ಞಾನ ಒಂದೇ ಇರುತ್ತದೆಂದು ತಿಳಿಯಬೇಕು.

ಭೂಮಿಮೇಲೆ ಮೊಟ್ಟಮೊದಲು ಗ್ರಂಥರೂಪದಲ್ಲಿ ದೇವರ ಜ್ಞಾನ ಬರುವುದರಿಂದ, ಮನುಷ್ಯರು ಜ್ಞಾನಿಗಳಾಗಿ ತಯಾರಾಗುವುದಕ್ಕೆ ಅವಕಾಶವಿದೆ. ಆದರೇ ಅದು ಭಾರತದೇಶದಲ್ಲಿ ಸಂಸ್ಕೃತ ಭಾಷೆಯಲ್ಲಿ ಬರೆಯಲ್ಪಟ್ಟಿರುವ ಗ್ರಂಥವಾಗಿದೆ. ಆದ್ದರಿಂದ ಒಂದೇ ಬಾರಿ ಭಾರತದೇಶದ ಪ್ರಜೆಗಳೆಲ್ಲರೂ ತಿಳಿಯುವುದಕ್ಕೆ ಅವಕಾಶ ಇಲ್ಲದೆ ಹೋಗಿದೆ. ಸಂಸ್ಕೃತ ಭಾಷೆ ಬಂದಿರುವವರು ಸಾವಿರ ಸಂಖ್ಯೆಯಲ್ಲಿ ಹೊರತು ಲಕ್ಷಗಳ ಸಂಖ್ಯೆಯಲ್ಲಿ ಕೂಡಾ ಇಲ್ಲದಂತೆ ಇರುವುದರಿಂದ ಎಲ್ಲರೂ ತಿಳಿಯುವುದಕ್ಕೆ ಅವಕಾಶವಿಲ್ಲವೆಂದೇ ಹೇಳಬಹುದು. ಅಂದಿನ ಭಾರತದೇಶ ಜನಸಂಖ್ಯೆ ಸುಮಾರು 20 ಕೋಟಿ ಕೂಡಾ ಇಲ್ಲ. ಅದರಲ್ಲಿ ಉತ್ತರ ದೇಶ ಬ್ರಾಹ್ಮಣರು, ಪಂಡಿತರು ಮಾತ್ರ ಸಂಸ್ಕೃತ ಭಾಷೆಯನ್ನು ಕಲಿತಿದ್ದರು. ವೇದಗಳನ್ನು ಕಲಿಯುವುದಕ್ಕೆ ಸಂಸ್ಕೃತ ಭಾಷೆಯನ್ನು ಕಲಿಯುತ್ತಿದ್ದರು. ಆದರೇ ಅಂದಿನ ಕಾಶೀ, ಬನಾರಸೀ ಬ್ರಾಹ್ಮಣರಿಗೆ, ಕಾಶ್ಮೀರ್ ಪಂಡಿತರಿಗೆ ಸಂಸ್ಕೃತ ಬಂದರೂ ವ್ಯಾಸನು ಬರೆದ ಭಗವದ್ಗೀತಾ ಜ್ಞಾನಕ್ಕೆ ಅವರು ಸ್ವಲ್ಪ ವಿರುದ್ಧವಾಗಿದ್ದರು. ಆದ್ದರಿಂದ ಅವರು ಭಗವದ್ಗೀತೆ ಮೇಲೆ ಅಸೂಯೆಯನ್ನು ಪ್ರದರ್ಶಿಸುತ್ತಿದ್ದರೇ ಹೊರತು ಪ್ರಚಾರ ಮಾಡಲಿಲ್ಲ. ಅಷ್ಟೇ ಅಲ್ಲದೆ ವ್ಯಾಸನ ಮರಣದ ನಂತರ ಕೆಲವರು ಸ್ವಾರ್ಥವರರು ಕೆಲವು ಹತ್ತರ ಸಂಖ್ಯೆಯಲ್ಲಿ ತಮಗೆ ಅನುಕೂಲವಾದ ಶ್ಲೋಕಗಳನ್ನು ಬರೆದು ಭಗವದ್ಗೀತೆಯಲ್ಲಿ ಬೆರೆಸಿದ್ದಾರೆ. ಇದೆಲ್ಲವೂ ಸಂಸ್ಕೃತ ಬಾರದ ಸಾಧಾರಣ ಪ್ರಜೆಗಳಿಗೆ ಯಾವಮಾತ್ರ ತಿಳಿದಿಲ್ಲ. ಆ ವಿಧವಾಗಿ ಸ್ವಲ್ಪ ರೂಪ ಬದಲಾದ ಭಗವದ್ಗೀತೆ ಈದಿನ ನಮ್ಮ ಮುಂದೆ ಇದೆ.

**ಪ್ರಶ್ನೆ :- ಭಗವದ್ಗೀತೆಯನ್ನು ನಿವು ತೌರಾತ್ ಗ್ರಂಥ ಎಂದು ಹೇಳಿದ್ದೀರಲ್ಲ!**

**ಅದರ ವಿವರ ಕೇಳಿದ್ದೇವೆ? ನೀವು ಅದನ್ನು ಹೇಳದಂತೆ ಪಕ್ಕದಾರಿ ಹಿಡಿಸಿ ಭಾರತದೇಶದಲ್ಲಿನ ಭಗವದ್ಗೀತೆಯನ್ನು ಕುರಿತು ಹೇಳುತ್ತಿದ್ದೀರ. ನಮಗೆ ಬೇಕಾಗಿರುವುದು ಪಶ್ಚಿಮ ದೇಶವಾದ ಇಸ್ರಾಯೇಲ್ ದೇಶದಲ್ಲಿ ಹುಟ್ಟಿದ ತೌರಾತ್ ಗ್ರಂಥವನ್ನು ಕುರಿತು ಕೇಳುತ್ತಿದ್ದೇವೆ?**

**ಉತ್ತರ :–** ತೌರಾತ್ ಗ್ರಂಥ ವಿಷಯವನ್ನು ಹೇಳುವುದಕ್ಕೇ ಮೊದಲು ಭಗವದ್ಗೀತಾ ಗ್ರಂಥವನ್ನು ಕುರಿತು ಉಪೋದ್ಘಾತವನ್ನು ಹೇಳಬೇಕಾಗಿ ಬಂದಿದೆ. ನೀವು ಕಾಣಿಸುವ ಮನೆಯನ್ನು ಕುರಿತು ಕೇಳಿದ್ದೀರ. ಆದರೇ ನಾನು ಮೇಲ್ನೋಟಕ್ಕೆ ಕಾಣಿಸದ ಬುನಾದಿ ಹತ್ತಿರದಿಂದ ಹೇಳುತ್ತಿದ್ದೇನೆ. ಮೇಲ್ನೋಟಕ್ಕೆ ಕಾಣಿಸುವ ಮನೆ ಎಷ್ಟಿದ್ದರೂ ಅದಕ್ಕೆ ತಪ್ಪದೆ ಕಾಣಿಸದ ಬುನಾದಿ ಭೂಮಿಯಲ್ಲಿ ಇರುತ್ತದೆ. ಮನೆ ಎಂದರೇ ಮೇಲೆಯಿಂದಲೇ ಲೆಕ್ಕಿಸಬಾರದು ಕೆಳಗೆ ಬುನಾದಿಯಿಂದ ಸಹ ನೋಡಬೇಕಾಗಿರುತ್ತದೆ. ತೌರಾತ್ ಗ್ರಂಥವನ್ನು ತಿಳಿಯಬೇಕೆಂದರೇ ಅದಕ್ಕೆ ಕಾಣಿಸದ ಬುನಾದಿಯಾಗಿರುವ ಭಗವದ್ಗೀತೆಯನ್ನು ಕುರಿತು ತಿಳಿಯಬೇಕಾಗಿದೆ. ಆದ್ದರಿಂದ ಭಗವದ್ಗೀತೆ ಮೊದಲು ಹೇಗೆ ಹುಟ್ಟಿದೆಯೋ ಸ್ವಲ್ಪ ತಿಳಿಯುವಂತೆ ಹೇಳಿದ್ದೇವೆ. ಹೇಳಿದ್ದೇವೆ ಎನ್ನುವದಕ್ಕಿಂತ 'ಹೇಳಿದ್ದಾನೆ' ಎಂದು ನೀವು ಗುರುತಿಟ್ಟುಕೊಳ್ಳಬೇಕು. ನಾನು ಹೇಳುತ್ತಿಲ್ಲ ನನ್ನ ಹಿಂದೆ ಇರುವವನು ಹೇಳಿದ್ದಾನೆಂದು ನೀವು ಮರೆಯಬಾರದು. ಬರೆಯುವ ಭಾಷೆಯಲ್ಲಿ ನಾನು ಎಂದು ಹೇಳಿದರೂ ಅಥವಾ ನಾವು ಎಂದು ಹೇಳಿದರೂ, ಹಾಗೆ ಭಾಷೆಯನ್ನು ಅನುಸರಿಸಿ ಬರೆಯಬೇಕಾಗಿ ಬಂದರೂ, ನೀವು ಮಾತ್ರ ಮಧ್ಯಾತ್ಮ ಮೇಲೆ ದೃಷ್ಠಿಯನ್ನು ಇಟ್ಟುಕೊಳ್ಳಬೇಕು. ಶರೀರದಲ್ಲಿನ ಜೀವಾತ್ಮ ಹೇಳುವುದಿಲ್ಲ, ಪರಮಾತ್ಮ ಮಾತನಾಡುವುದಿಲ್ಲ, ಮಾತನಾಡುವವನು ಒಬ್ಬ ಆತ್ಮೇ ಎಂದು ಮರೆಯಬಾರದು.

ತೌರಾತ್ ಗ್ರಂಥ ಪಶ್ಚಿಮ ದೇಶವಾದ ಇಸ್ರಾಯೇಲ್ ದೇಶದಲ್ಲೇ ಹುಟ್ಟಿದೆಯೆಂದು ಖಚಿತವಾಗಿ ಹೇಳಲಾರೆವು ಆದರೆ, ಇಸ್ರಾಯೇಲ್ ಪರಿಸರ ಪ್ರಾಂತದಲ್ಲಿ ಹುಟ್ಟಿದೆಯೆಂದು ಹೇಳಬಹುದು. ತೌರಾತ್ ಗ್ರಂಥ ಯಾವ ಭಾಷೆಯಲ್ಲಿ ಇದ್ದಿತ್ತೋ ಇಂದಿಗೂ ಸಹ ಯಾರಿಗೂ ತಿಳಿದಿಲ್ಲ. ತೌರಾತ್

ಗ್ರಂಥ ಭಾಷೆ ಹೇಗೆ ತಿಳಿದಿಲ್ಲವೋ ಹಾಗೆಯೇ ಆ ಗ್ರಂಥವನ್ನು ಯಾರು ಬರೆದಿದ್ದಾರೋ ಸಹ ತಿಳಿದಿಲ್ಲ. ಆದರೇ ಕೆಲವು ವಿಷಯಗಳನ್ನು ಮಾತ್ರ ಖಚಿತವಾಗಿ ಹೇಳಬಲ್ಲೆವು. ಭಾರತದೇಶದಲ್ಲಿ ಸುಮಾರು ಐದು ಸಾವಿರ ವರ್ಷಗಳ ಕೆಳಗೆ ಭಗವದ್ಗೀತೆ ಗ್ರಂಥರೂಪವಾಗಿದೆ. ಸೃಷ್ಠಿ ಆದಿಯಲ್ಲಿ ದೇವರು ತನ್ನ ಆತ್ಮದ ಮುಖಾಂತರ ಆಕಾಶದಿಂದ ಹೇಳಿಸಿದ ಜ್ಞಾನವನ್ನು ಭಗವಂತನ ಮೂಲಕ ಮನುಷ್ಯರಿಗೆ ಸೇರಿಸಿದ್ದಾನೆ. ಭಗವಂತನು ಹೇಳಿದ ಜ್ಞಾನ ಎನ್ನುವಂತೆ ಆಗ ಹೇಳಿದ ಜ್ಞಾನಕ್ಕೆ ಭಗವದ್ಗೀತೆಯೆಂದು ಹೆಸರು ಇಟ್ಟು ಹೇಳುವುದಾಗಿದೆ. ಭಗವದ್ಗೀತೆ ಗ್ರಂಥರೂಪ ಆಗದಿರುವಾಗ "ಜಪರ" ಎನ್ನುವ ಹೆಸರಿನೊಂದಿಗೆ ಇರುವ ಜ್ಞಾನವೇ ಮೊಟ್ಟಮೊದಲ ದೈವಗ್ರಂಥವಾಗಿ ಬದಲಾಗಿದೆ. ಮೊದಲು ಸಂಸ್ಕೃತ ಭಾಷೆಯಲ್ಲಿ ಬರೆದ ಭಗವದ್ಗೀತೆಯನ್ನು ನಂತರ ಯಾವ ಭಾಷೆಯಲ್ಲಿ ಬರೆದರೂ ಅದು ಪ್ರಥಮ ದೈವಗ್ರಂಥವಾಗಿಯೇ ಇರುತ್ತದೆ. ಭಗವದ್ಗೀತೆ ವ್ಯಾಸಮಹರ್ಷಿ ಮೂಲಕ ತಯಾರಾದರೂ ಭಾರತದೇಶಕ್ಕೆ ಪಶ್ಚಿಮ ದಿಕ್ಕಿನಲ್ಲಿರುವ ಇಸ್ರಾಯೇಲ್ ದೇಶ ಪ್ರಾಂತದೊಳಗೆ ಭಗವದ್ಗೀತೆ ಸೇರಿಸಲ್ಪಟ್ಟಿದೆ. ಆ ಪ್ರಾಂತ ಭಾಷೆಯಲ್ಲಿಯೇ ಆ ಪ್ರಾಂತದಲ್ಲಿರುವ ವ್ಯಕ್ತಿ ಹತ್ತಿರಕ್ಕೆ ಭಗವದ್ಗೀತೆಯನ್ನು ಸೇರಿಸುವುದಾಗಿದೆ. ಆಗ ಭಾರತದೇಶದಲ್ಲಿ ಸಂಸ್ಕೃತ ಭಾಷೆಯಲ್ಲಿ ಹೊರತುಪಡಿಸಿ ಇತರ ಭಾಷೆಯಲ್ಲಿ ಭಗವದ್ಗೀತೆ ಇಲ್ಲ. ಕೃಷ್ಣನು ಭಾರತ ಯುದ್ಧದಲ್ಲಿ ಹೇಳಿದ ಭಗವದ್ಗೀತಾ ಜ್ಞಾನವನ್ನು ಕೃಷ್ಣನ ವಯಸ್ಸು ಸುಮಾರು 90 ವರ್ಷಗಳಿರುವಾಗ ಅರ್ಜುನನಿಗೆ ಹೇಳುವುದಾಗಿದೆ.

ದೇವರು ಅಥವಾ ಅಲ್ಲಾಹ್ ಅಥವಾ ಪರಮಾತ್ಮ ಮಾರ್ಗ ಹೇಗೆ ಇರುತ್ತದೋ ಯಾರಿಗೂ ತಿಳಿದಿಲ್ಲ. ಆತನು ಮೊದಲೇ ನಿಶ್ಚಯಿಸಿಕೊಂಡ ಪ್ರಣಾಳಿಕೆಯನ್ನು ಅನುಸರಿಸಿ ಎಲ್ಲವೂ ಅದಷ್ಟಕ್ಕದೆ ನಡೆಯುತ್ತಿರುತ್ತದೆ. ಕೃಷ್ಣನು ಒಟ್ಟಾರೆ 126 ವರ್ಷಗಳು ಬದುಕುವುದು ನಡೆದಿದೆ. ಕೃಷ್ಣನು ಮರಣಿಸಿದಾಗ ತನ್ನ ಎದುರುಗಡೆ ಇರುವ ಬೇಟೆಗಾರನಿಗೆ ಮುಂದೆ ನಡೆಯುವ ಕೆಲವು ವಿಷಯಗಳು ಹೇಳಿ, ತನ್ನ ಎರಡನೆ ಜನ್ಮವನ್ನು ಕುರಿತು ಸಹ ಹೇಳಿ

ಮರಣಿಸುವುದು ನಡೆದಿದೆ. ಹಾಗೆ ಮರಣಿಸಿದ ಕೃಷ್ಣನು ಸಾಕ್ಷಾತ್ತು ದೇವರೇ ಆದರೂ ಮಾನವನಾಗಿಯೇ ಪ್ರವರ್ತಿಸಿದ್ದಾನೆ. ಮರಣಿಸಿದಾಗ ಪುನಃ ದೇವರಾಗಿಯೇ ಬದಲಾಗಬೇಕಾದ ಆತನು ಹಾಗೆ ಬದಲಾಗಲಿಲ್ಲ. ಇನ್ನೂ ಸ್ವಲ್ಪ ಕಾಲ ಮೂರು ಆತ್ಮಗಳಿಂದಲೇ ಕೆಲಸ ಮಾಡಬೇಕೆಂದುಕೊಂಡಿದ್ದಾನೆ. ತಾನು ಸೃಷ್ಠಿ ಆದಿಯಲ್ಲಿನ ಜ್ಞಾನವನ್ನು ಭಗವದ್ಗೀತೆಯಾಗಿ ಭಾರತದೇಶವನ್ನು ಆಯ್ಕೆ ಮಾಡಿಕೊಂಡು ಭಾರತದೇಶದಲ್ಲಿನ ದಕ್ಷಿಣ ಪ್ರಾಂತದಲ್ಲಿ ಹೇಳಿದ್ದಾನೆ. ಅಲ್ಲಿಯವರೆಗು ದೇವರ ಜ್ಞಾನಕ್ಕೆ ನಿಲಯವಾಗಿ ಇದ್ದು, ಇಂದೂ ದೇಶವೆಂದು ಹೆಸರು ಹೊಂದಿದ ಭಾರತದೇಶದಲ್ಲಿ ಪ್ರಣಾಳಿಕಬದ್ಧವಾಗಿ ಜ್ಞಾನವನ್ನು ಹೇಳಿ, ಹಾಗೆಯೇ ವ್ಯಾಸನಿಂದ ಗ್ರಂಥರೂಪ ಮಾಡಿಸಿದ್ದಾನೆ. ಆದರೇ ಭಾರತದೇಶದಲ್ಲಿ ಹುಟ್ಟಿದ ಭಗವದ್ಗೀತೆ ಐದುಸಾವಿರ ವರ್ಷಗಳ ನಂತರ ಪ್ರಕಾಶಿಸುವಂತೆ ಆತನ ನಿರ್ಣಯ ನಡೆದಿದೆ. ಅಲ್ಲಿಯವರೆಗು ಸುರಕ್ಷಿತವಾಗಿರುವ ದೇಶ ಭಾರತದೇಶ ವೆಂದು ತಿಳಿದು ಭಗವದ್ಗೀತೆಯನ್ನು ಭಾರತದೇಶದಲ್ಲಿಯೇ ಹೇಳುವುದಾಗಿದೆ.

ಭಾರತದೇಶ ದೈವ ಜ್ಞಾನಕ್ಕೆ ನಿಲಯವೆಂದೂ, ಹಾಗೆಯೇ ಅಜ್ಞಾನಕ್ಕೆ ಸಹ ನಿಲಯವೆಂದು ದೇವರಿಗೆ ಚೆನ್ನಾಗಿ ತಿಳಿದಿದೆ. ತಿಳಿದು ಪ್ರಪಂಚ ದೇಶಗಳು ಎಷ್ಟಿದ್ದರೂ ಅವುಗಳಲ್ಲಿ ಅಲ್ಲದೆ ಭಾರತದೇಶದಲ್ಲಿಯೇ ಭಗವದ್ಗೀತೆಯನ್ನು ಹೇಳಿದ್ದಾನೆ. ಭಾರತದೇಶದಲ್ಲಿ ಭಗವದ್ಗೀತೆ ಮಸಿ ಬಟ್ಟೆಯಲ್ಲಿ ಸುತ್ತಿದ ಮಾಣಿಕ್ಯದಂತೆ ಇರುತ್ತದೆಂದು, ಪುನಃ ತಾನು ಬಂದಾಗ ತನ್ನ ಭಗವದ್ಗೀತೆಯನ್ನು ಕುರಿತು ಹೇಳಿದರೂ ತನ್ನನ್ನು ಯಾರೂ ಗುರುತಿಸಲಾರರೆನ್ನುವ ಉದ್ದೇಶದಿಂದ ಸೃಷ್ಠಿ ಆದಿಯಲ್ಲಿನ ಜ್ಞಾನವನ್ನು ಭಗವದ್ಗೀತೆಯಾಗಿ ಭಾರತದೇಶದಲ್ಲಿಟ್ಟು ಕೃಷ್ಣನು ಮರಣಿಸಿದ್ದಾನೆ. ಕೃಷ್ಣನು ಮರಣಿಸುತ್ತಾ ಭೇಟೆಗಾರನಿಗೆ ಹೇಳಿದ ವಿಷಯಗಳು ಬಹಳ ರಹಸ್ಯವಾದವು. ಇತರರಿಗೆ ತಿಳಿದರೂ ಯಾರೂ ನಂಬುವುದಿಲ್ಲವೆನ್ನುವ ಧೈರ್ಯದಿಂದಲೇ ಭೇಟೆಗಾರನಿಗೆ ಹೇಳಿ ಹೋಗಿದ್ದಾನೆ. ಆತನು ಹೋಗುತ್ತಾ ಇಸ್ರಾಯೇಲ್ ದೇಶದಲ್ಲಿ ಮುಂಬರುವ ತನ್ನ ಜನ್ಮವನ್ನು ಕುರಿತು ತಿಳಿಸಿ ಹೋಗುವುದೇ ಅಲ್ಲದೆ, ಅದಕ್ಕೆ ತಕ್ಕ ಏರ್ಪಾಟುಗಳನ್ನು ಅಂದಿನಿಂದಲೇ

ಪ್ರಾರಂಭಿಸಿದಂತೆ ಸ್ವಲ್ಪ ತಿಳಿಯುತ್ತಿದೆ. ಕೃಷ್ಣನು ಮರಣಿಸಿದ ನಂತರ ಆತನು ಮೂರು ಆತ್ಮಗಳಾಗಿ ಇನ್ನೂ ಸ್ವಲ್ಪ ಕಾಲ ಇರಬೇಕೆಂದುಕೊಂಡಿದ್ದಾನೆಂದು ಅಂದುಕೊಂಡಿದ್ದೇವಲ್ಲವೆ! ಅದೇ ವಿಧವಾಗಿ ಇಸ್ರಾಯೇಲ್ ದೇಶ ಸಮೀಪದಲ್ಲಿನ ಒಬ್ಬ ವ್ಯಕ್ತಿ ಶರೀರದಲ್ಲಿ ಪ್ರವೇಶಿಸಿ ಆ ಶರೀರದಿಂದ ತನ್ನ ಭಾವನೆಗಳನ್ನು ಕೆಲವನ್ನು ಪ್ರದರ್ಶಿಸಿದ್ದಾನೆ. ಈಗ ಹೇಳುವ ಮಾತು ನಂಬಲಾಗದಂತಹ ಮಾತು. ಯಾರೂ ನಂಬುವುದಿಲ್ಲವೆನ್ನುವ ಧೈರ್ಯದಿಂದಲೇ ಆತ್ಮ ಸತ್ಯವನ್ನು ತಿಳಿಸುತ್ತಿದೆಯೆಂದು ಅಂದುಕೊಳ್ಳುತ್ತೇವೆ. ಹಾಗೆ ಮಾನವ ಶರೀರದಲ್ಲಿ ಸೇರಿದ ಕೃಷ್ಣ ಪರಮಾತ್ಮ ಒಂಬತ್ತು ವರ್ಷಗಳು ಆ ಶರೀರದಲ್ಲಿ ಕಳೆಯುವುದು ನಡೆದಿದೆ. ನಂತರ ಆ ಶರೀರದಲ್ಲಿ 135 ವರ್ಷಗಳಿರುವಾಗ ಮರಣಿಸುವುದಾಗಿದೆ. ಕೃಷ್ಣನು 135 ವರ್ಷಗಳು ಬದುಕಿದ್ದಾನೆಂದು, ಕೃಷ್ಣ ಶರೀರದಲ್ಲಿ 126 ವರ್ಷಗಳು ಜೀವಿಸಿದಾಗ, ನಂತರ ಒಂಬತ್ತು ವರ್ಷಗಳು ಅಧಿಕವಾಗಿ ಇರುವುದರಿಂದ ಕೃಷ್ಣ ಜನ್ಮ ಒಟ್ಟು 135 ವರ್ಷಗಳು ಬದುಕಿದಂತಾಗಿದೆ. 1+2+6 = 9 ಆದಾಗ ಕೃಷ್ಣ ಭಗವಾನನು ಶರೀರವನ್ನು ಬಿಟ್ಟಾಗ, ಅದೇ ಸಂಖ್ಯೆ ಒಂಬತ್ತು ಆದಾಗ ಅಂದರೆ 1+3+5 = 9 ಆದಾಗ ಕೃಷ್ಣನು ಸೇರಿದ ಎರಡನೆ ದೇಹವನ್ನು ಸಹ ಬಿಟ್ಟು ಹೋಗುವುದು ನಡೆದಿದೆ.

**ಪ್ರಶ್ನೆ :– ಕೃಷ್ಣನು ಮರಣಿಸಿ ಸೂಕ್ಷ್ಮ ಶರೀರದೊಂದಿಗೆ ಮತ್ತೊಬ್ಬನ ಶರೀರದೊಳಗೆ ಸೇರುವುದು ನಂಬಲಾಗದಂತಹ ಮಾತಾಗಿ ಇದೆ. ಆತನ ಪೂರ್ತಿ ಮರಣವನ್ನು ಹೊಂದಲಿಲ್ಲವಾ? ಅಕಾಲಮರಣವನ್ನು ಹೊಂದಿದ್ದಾನಾ? ದೆವ್ವ ಇತರ ಮನುಷ್ಯರಲ್ಲಿ ಸೇರುವಂತೆ ಸೇರಬೇಕಾದ ಅವಶ್ಯಕ ಭಗವಂತನಾದ ಕೃಷ್ಣನಿಗೆ ಏಕೆ ಬಂದಿದೆ? ನಮ್ಮಲ್ಲಿರುವ ಅನೇಕ ಸಂಶಯಗಳಿಗೆ ನೀವು ಉತ್ತರ ಹೇಳಬೇಕು?**

**ಉತ್ತರ :–** ಕೃಷ್ಣನು ಸಾಧಾರಣವಾದ ಮನುಷ್ಯನಲ್ಲ. ಆತನು ಪ್ರತ್ಯೇಕವಾಗಿ ಬಂದಿರುವ ಭಗವಂತನು. ಭಗವಂತನ ಶರೀರದಲ್ಲಿ ಮೂರು ಆತ್ಮಗಳು ಇದ್ದರೂ, ಆತ್ಮ ತನ್ನ ಕೆಲಸ ತಾನು ಮಾಡಿದರೂ, ಜೀವಾತ್ಮ ಆದವನು ಕರ್ಮ ಇಲ್ಲದವನು, ಪ್ರತ್ಯೇಕವಾದವನು. ಆತನಿಗೆ ಎಲ್ಲರ ಹಾಗೆ ಮರಣವಿರುವುದಿಲ್ಲ. 'ಜಗವನ್ನೇ

ಅರಿತ ಬ್ರಾಹ್ಮಣನಿಗೆ ಜನಿವಾರವೇಕೆ' ಎನ್ನುವಂತೆ ಆತನಿಗೆ ಮರಣಗಳು ಅನ್ವಯಿಸುವುದಿಲ್ಲ. ಹಾಗೆಯೇ ಎಲ್ಲರಹಾಗೆ ಹುಟ್ಟುವಿಕೆ ಸಹ ಅನ್ವಯಿಸುವುದಿಲ್ಲ. ತಂದೆ ವೀರ್ಯ ಕಣದಿಂದ ಸಂಬಂಧವಿಲ್ಲದೇ ಹುಟ್ಟಿದ ಆತನಿಗೆ ಎಲ್ಲರ ಹಾಗೆ ಹುಟ್ಟು ಹೇಗೆ ಇಲ್ಲವೋ ಹಾಗೆಯೇ ಆತನಿಗೆ ಎಲ್ಲರ ಹಾಗೆ ಜೀವಿಯು ಶರೀರವನ್ನು ಬಿಟ್ಟು ಮರಣಿಸುವುದು ಇಲ್ಲ. ಆತನು ಕರ್ಮದಿಂದ ಸಂಬಂಧ ಇಲ್ಲದವನು. ಒಂದು ಕಡೆ ಮರಣಿಸಿ ಮತ್ತೊಂದು ಕಡೆ ಹೋಗುವುದಕ್ಕೆ ಆತನಿಗೆ ಕರ್ಮ ಇಲ್ಲ. ಆತನ ಸ್ವಯಂ ನಿರ್ಣಯದ ಪ್ರಕಾರ ಹುಟ್ಟುವಿಕೆ ಇರುತ್ತದೆ ಮತ್ತು ಸಾವು ಇರುತ್ತದೆ. ಆತನು ಪ್ರಸ್ಥುತ ಭಗವಂತನಾದರೂ ಆತನೇ ಮೂರನೆ ಶಕ್ತಿಯಾದ ಪರಮಾತ್ಮ (ದೇವರು). ಆದ್ದರಿಂದ ಆತನನ್ನು ಶಾಸಿಸುವ ಶಕ್ತಿ ಯಾವುದೂ ಇಲ್ಲ. ಆತನು ಧರ್ಮಸಂಸ್ಥಾಪನೆಗೋಸ್ಕರ ಸ್ವಯಂ ನಿರ್ಣಯವನ್ನು ತೆಗೆದುಕೊಳ್ಳುವನು. ಭವಿಷ್ಯತ್ ಪ್ರಣಾಳಿಕೆಯನ್ನು ಅನುಸರಿಸಿ ಆತನು ಮಾಡುವ ಕೆಲಸಗಳಿರುತ್ತವೆ. ತನ್ನ ಎರಡನೆ ಬರುವಿಕೆಯನ್ನು ಕುರಿತು ಭೇಟಿಗಾರನಿಗೆ ಸ್ವಲ್ಪ ಸಮಾಚಾರವನ್ನು ತಿಳಿಸಿದ ಕೃಷ್ಣನು, ಅದೇ ಸಮಾಚಾರ ನಿಮಿತ್ತ ಇಸ್ರಾಯೇಲ್ ದೇಶದ ಸಮೀಪದಲ್ಲಿರುವ ಒಬ್ಬ ಪ್ರವಕ್ತ ಶರೀರದೊಳಗೆ ಪ್ರವೇಶಿಸಿದ್ದಾನೆ. ಅಂದಿನ ಕಾಲದಲ್ಲಿ ಜ್ಞಾನ ಸಮಾಚಾರವನ್ನು ತಿಳಿಸುವ ವ್ಯಕ್ತಿಯನ್ನು ಪ್ರವಕ್ತ ಎನ್ನುವುದು ಸಹಜ. ಅದು ಸ್ವಲ್ಪ ಜ್ಞಾನವಾದರೂ ಆಗಬಹುದು ಇಲ್ಲವೆ ಹೆಚ್ಚಿನ ಜ್ಞಾನವಾದರೂ ಆಗಬಹುದು. ಒಟ್ಟಾರೆ ಜ್ಞಾನ ಸಮಾಚಾರವನ್ನು ತಿಳಿಸುವ ಪ್ರವಕ್ತನಾಗಿರುವ ವ್ಯಕ್ತಿಗೆ ಕೃಷ್ಣನ ಮರಣದ ಸಮಯಕ್ಕೆ ಆತನ ಮರಣವೂ ಸಹ ನಿರ್ಣಯಿಸಲ್ಪಟ್ಟಿತ್ತು. ಆತನ ಹೆಸರು **"ಮೋಷೇ"** ಎಂದು ಹೇಳಲ್ಪಡುತ್ತಿತ್ತು. ಮೋಷೇ ಪ್ರವಕ್ತ ಆ ಸಮಯಕ್ಕೆ ಮರಣಿಸುವನೆನ್ನುವ ವಿಷಯ ಕೃಷ್ಣನಿಗೆ ಹೊರತು ಯಾರಿಗೂ ತಿಳಿದಿಲ್ಲ. ಮೋಷೇಗೂ ಸಹ ತಿಳಿದಿಲ್ಲ. ಮೋಷೇ ಸಾಧಾರಣ ಮನುಷ್ಯ ನಾಗಿರುವುದರಿಂದ ತನ್ನ ಮರಣವನ್ನು ಕುರಿತು ಮೋಷೇಗೆ ತಿಳಿದಿಲ್ಲ.

ಸರ್ವ ಸೃಷ್ಠಿಕರ್ತನಾದ ಅಲ್ಲಾಹ್‌ನೇ (ದೇವರೇ) ಮೋಷೇಯನ್ನು ಆ ಪ್ರಾಂತದಲ್ಲಿ ಹೆಸರು ಹೊಂದಿದ ಪ್ರವಕ್ತನಾಗಿ ಮಾಡಿಟ್ಟಿದ್ದಾನೆ. ಮೋಷೇ 54 ವರ್ಷಗಳು ಬದುಕಿದ್ದಾನೆ. ಮೋಷೇ 54 ವರ್ಷಗಳು ಬದುಕುವಂತೆ, ಮೋಷೇ ಮರಣಿಸುವ ಸಮಯಕ್ಕೆ ಕೃಷ್ಣನು ಮರಣಿಸುವಂತೆ ಮೊದಲೇ ನಿರ್ಣಯ ನಡೆದಂತೆ ಯಾರಿಗೂ ತಿಳಿದಿಲ್ಲ. ಕೃಷ್ಣನಿಗೆ ಮಾತ್ರ ಎಲ್ಲಾ ತಿಳಿದೇ ನಡೆದಿವೆ. ಆತನು ಸ್ವತಃವಾಗಿ ದೇವರೇ ಆಗಿರುವುದರಿಂದ ಆತನಿಗೆ ಎಲ್ಲಾ ತಿಳಿದಿದೆ. ಮೋಷೇ ಮರಣಿಸಿದ ಕ್ಷಣದಲ್ಲಿಯೇ ಕೃಷ್ಣನು ಮರಣಿಸಿ ಮೋಷೇ ಶರೀರದಲ್ಲಿ ಪ್ರವೇಶಿಸುವಂತೆ ನಿರ್ಣಯಿಸಿಕೊಂಡಿದ್ದಾನೆ. ಮೋಷೇ ಪ್ರವಕ್ತ ಮರಣಿಸುವುದು, ಕೃಷ್ಣ ಭಗವಾನ್ ಮರಣಿಸುವುದು ಒಂದೇ ಬಾರಿ ನಡೆದಿದೆ. ಕೃಷ್ಣನು ತನ್ನ ಶರೀರದಲ್ಲಿ ಇಲ್ಲದಂತೆ ಹೋಗಿ ಮೋಷೇ ಶರೀರದಲ್ಲಿ ಪ್ರತ್ಯಕ್ಷವಾಗಿದ್ದಾನೆ. ಹಾಗೆ ಮೋಷೇ ಶರೀರದಲ್ಲಿ ಮರಣಿಸಿದಂತೆ ಯಾರೂ ಗುರುತಿಸುವುದಿಲ್ಲ. ಮೋಷೇ ಮರಣಿಸಿದರೂ ಅದರಲ್ಲಿ ಕೃಷ್ಣನು ಇರುವುದರಿಂದ ಮೋಷೇ ಸಾಧಾರಣವಾಗಿ ಬದುಕೇ ಇದ್ದಾನೆಂದು ಎಲ್ಲರೂ ಅಂದುಕೊಂಡಿದ್ದಾರೆ. ಕೃಷ್ಣನು ಮೋಷೇಯಂತೆಯೇ ಇದ್ದು ಜ್ಞಾನವನ್ನು ಹೇಳುತ್ತಿರುವುದರಿಂದ ಕೃಷ್ಣನನ್ನು ಯಾರೂ ಗುರುತಿಸಲಿಲ್ಲ, ಎಲ್ಲರೂ ಮೋಷೇನೇ ಮಾತನಾಡುತ್ತಿದ್ದಾನೆಂದು ಅಂದುಕೊಳ್ಳುವುದು ನಡೆದಿದೆ. ಕೃಷ್ಣನು ಮರಣಿಸಿದಂತೆ ಭಾರತದೇಶ ದಲ್ಲಿರುವವರಿಗೆ ತಿಳಿದರೂ, ಆತನು ಮೋಷೇಯಾಗಿ ಇತರ ದೇಶದಲ್ಲಿ ಇದ್ದಾನೆಂದು ಮಾತ್ರ ತಿಳಿದಿಲ್ಲ.

**ಪ್ರಶ್ನೆ :– ಪ್ರಪಂಚದಲ್ಲಿ ಎಷ್ಟೋ ಪ್ರವಕ್ತರಿರುವಾಗ ಮೋಷೇ ಪ್ರವಕ್ತ ಶರೀರವನ್ನೇ ಕೃಷ್ಣನು ಏಕೆ ಆಯ್ಕೆ ಮಾಡಿಕೊಂಡಿದ್ದಾನೆ?**

**ಉತ್ತರ :–** ಇದು ಒಳ್ಳೆಯ ಪ್ರಶ್ನೇ. ಸಮಯಾನುಕೂಲವಾಗಿ ಕೇಳಬೇಕಾದ ಪ್ರಶ್ನೇ. ಇದಕ್ಕೆ ನನ್ನ ಉತ್ತರ ಏನೆಂದರೇ ಕೃಷ್ಣನು ಭಗವದ್ಗೀತೆಯನ್ನು ಹೇಳಿದ ನಂತರ ವ್ಯಾಸ ಮಹರ್ಷಿ ಕೃಷ್ಣನು ಹೇಳಿದ ಜ್ಞಾನವನ್ನು ಗ್ರಂಥರೂಪ ಮಾಡುವುದಕ್ಕೆ ಸುಮಾರು ಎರಡು ವರ್ಷಗಳು ಹಿಡಿಸಿದೆ. ಸ್ವಚ್ಛವಾದ ಕಲಬೆರಕೆ ಇಲ್ಲದ

ಭಗವದ್ಗೀತೆ ಆಗಿನ ಕಾಲದಲ್ಲಿತ್ತು. ವ್ಯಾಸನು ಮರಣಿಸಿದ ನಂತರ ಕೆಲವರು ಸ್ವಾರ್ಥಪರರು ಅವರ ಸ್ವಾರ್ಥದಿಂದ ಕೆಲವು ಶ್ಲೋಕಗಳನ್ನು ಸೇರಿಸುವುದು ನಡೆದಿದೆ. ಮೊದಲು ತಯಾರಾಗಿರುವುದು ಕಲುಷಿತ ಶ್ಲೋಕಗಳು ಇಲ್ಲದ ಭಗವದ್ಗೀತೆಯಾಗಿ ಇತ್ತು. ಕೃಷ್ಣನು 90 ವರ್ಷಗಳ ವಯಸ್ಸಿನಲ್ಲಿ ಅರ್ಜುನನಿಗೆ ಸೃಷ್ಠಿ ಆದಿಯಲ್ಲಿನ ಜ್ಞಾನವನ್ನು ಹೇಳಿದಾಗ, ನಂತರ ಎರಡು ವರ್ಷಗಳ ಕಾಲದಲ್ಲಿ ಅದು ಗ್ರಂಥರೂಪವಾಗಿ ಬದಲಾದಾಗ ಅದರ ಹೆಸರು 'ಭಗವದ್ಗೀತೆ' ಎಂದು ಹೇಳಿಕೊಂಡಿದ್ದೇವೆ. ಮೋಷೇ 54 ವರ್ಷಗಳು ಬದುಕಿರುವಾಗ, ಕೃಷ್ಣನಿಗೆ 92 ವರ್ಷಗಳ ವಯಸ್ಸಿನಲ್ಲಿ ಭಗವದ್ಗೀತೆ ತಯಾರಾಗಿದೆ. ಭಗವದ್ಗೀತೆ ತಯಾರಾದ ಸಮಯಕ್ಕೆ ಮೋಷೇ ವಯಸ್ಸು ಸರಿಯಾಗಿ 20 ವರ್ಷಗಳಿರುತ್ತದೆ. 20 ವರ್ಷಗಳ ನಂತರ 34 ವರ್ಷಗಳು ಮೋಷೇ ಬದುಕಿದ್ದಾನೆ. ಹಾಗೆಯೇ ಕೃಷ್ಣನು ಕೂಡಾ 92 ವರ್ಷಗಳ ನಂತರ 34 ವರ್ಷಗಳೇ ಬದುಕಿದ್ದಾನೆ.

ಮೋಷೇಗೆ ಇಪ್ಪತ್ತು (20) ವರ್ಷಗಳ ವಯಸ್ಸಿನಲ್ಲಿ ಒಂದು ಶುಭದಿನ ಏರ್ಪಟ್ಟಿತು. ಅಂದಿನಿಂದ ಮೋಷೇ ಆಗಾಗ ಸ್ವಲ್ಪ ಜ್ಞಾನವನ್ನು ಹೇಳುತ್ತಾ ಒಳ್ಳೆಯ ವಕ್ತನಾಗಿ ಬದಲಾಗಿದ್ದಾನೆ. ನಂತರ ಆತನನ್ನು ಪ್ರವಕ್ತ ಎಂದು ಎಲ್ಲರೂ ಕರೆದಿದ್ದಾರೆ. 20 ವರ್ಷಗಳಿಂದ ಆತನ ಜೀವನದಲ್ಲಿ ಒಂದು ಹೊಸ ಬೆಳಕು ಬಂದಿತು. 92ನೇ ವರ್ಷದಲ್ಲಿ ಕೃಷ್ಣನಲ್ಲಿ ಸಹ ಒಂದು ತೃಪ್ತಿ ಏರ್ಪಟ್ಟಿತು. ಆಗ ನಡೆದ ವಿಷೇಷವೇನೆಂದರೆ! ಮೋಷೇಗೆ 20 ವರ್ಷಗಳು ಕಳೆಯುತ್ತಿರುವ ಕಾಲದಲ್ಲಿ ಒಂದು ದಿನ ಭಾನುವಾರ ರಾತ್ರಿ ಮಧ್ಯರಾತ್ರಿ ಕಳೆದ ಸಮಯದಲ್ಲಿ ಸ್ವಪ್ನ ಬರುವುದು ನಡೆಯಿತು. ಆ ಸ್ವಪ್ನದಲ್ಲಿ ಕೃಷ್ಣನು ಕಾಣಿಸಿ ಗ್ರಂಥವಾದ ತನ್ನ ಭಗವದ್ಗೀತೆಯನ್ನು ಮೋಷೇಗೆ ಕೊಡುವುದು ನಡೆದಿದೆ. ಮೋಷೇ ತನ್ನ ಸ್ವಪ್ನದಲ್ಲಿ ಕೃಷ್ಣನನ್ನು ನೋಡಿದರೂ ಕೃಷ್ಣನು ಯಾರೋ ತನಗೆ ತಿಳಿದಿಲ್ಲ. ಆದರೇ ಸ್ವಪ್ನದಲ್ಲಿ ಕಾಣಿಸಿದ ಕೃಷ್ಣನು ಎಷ್ಟೋ ತೇಜಸ್ಸು ಹೊಂದಿರುವುದನ್ನು ನೋಡಿದ ಮೋಷೇ ಆತನು ನಿಜವಾಗಿ ದೇವರೆಂದು ನಂಬಿದ್ದಾನೆ. ತೇಜಸ್ಸಿನೊಂದಿಗೆ ಕಾಣಿಸಿದ ಕೃಷ್ಣನು ಮೋಷೇಗೆ ಭಗವದ್ಗೀತಾ ಗ್ರಂಥವನ್ನು

ಕೊಟ್ಟು ಇದು ತೌರಾತ್ ಗ್ರಂಥವೆಂದು ಹೇಳುವುದು ನಡೆದಿದೆ. ಮೋಷೇ ಸ್ವಪ್ನದಲ್ಲಿ ಗ್ರಂಥವನ್ನು ತೆಗೆದುಕೊಂಡು ಗುಂಡಿಗೆಗೆ ಅಪ್ಪಿಕೊಂಡನು. ಅಷ್ಟೇ! ಆತನ ಮೆದುಳಿನಲ್ಲಿ ಮಿಂಚು ಹೊಳೆದಂತಾಯಿತು. ಮೋಷೇಗೆ ಒಂದು ಸಲ ಎಚ್ಚರವಾಯಿತು. ಎಚ್ಚರ ಬಂದ ನಂತರ ಕೂಡಾ ಗುಂಡಿಗೆ ಜೋರಾಗಿ ಬಡಿದುಕೊಳ್ಳುತ್ತಿರುವಾಗ, ತಲೆಯಲ್ಲಿ ಯಾವುದೋ ಹೊಸ ಅನುಭೂತಿಯನ್ನು ಹೊಂದಿದ ಸಂತೋಷ ಉಂಟಾಯಿತು. ನಡೆದಿರುವುದು ಏನು? ಎಂದು ಕಣ್ಣು ತೆರೆದು ನೋಡಿದಾಗ ತನ್ನ ಕೈಗಳಲ್ಲಿ ಗ್ರಂಥ ಕಾಣಿಸಿತು. ಅದುವೇ ತೌರಾತ್ ಗ್ರಂಥ. ಅದರ ಮೇಲೆ ಅಂದಿನ ಭಾಷೆಯಲ್ಲಿ 'ತೌರಾತ್' ಎಂದು ಇರುವುದು ಮೋಷೇ ನೋಡಿದ್ದಾನೆ. ಆ ವಿಧವಾಗಿ ಮೋಷೇಗೆ ತೌರಾತ್ ಗ್ರಂಥ ಲಭಿಸಿತು. ಅಲ್ಲಿನ ತೌರಾತ್ ಗ್ರಂಥವೇ ಇಲ್ಲಿನ ಭಗವದ್ಗೀತೆ.

ತೌರಾತ್ ಎಂದರೇ ಮೂರು ಕತ್ತಲು ರಾತ್ರಿಗಳೆಂದು ಅರ್ಥ. ಮೂರು ಕಾಣಿಸದ ಆತ್ಮಗಳೊಂದರ ಜ್ಞಾನವಿರುವುದರಿಂದ, ಮೂರು ಆತ್ಮಗಳ ಜ್ಞಾನ ರಹಸ್ಯವಾದುದಾದ್ದರಿಂದ, ಮೂರು ಆತ್ಮಗಳನ್ನುದ್ದೇಶಿಸಿ ತೌರಾತ್ ಎಂದು ಭಗವದ್ಗೀತೆಗೆ ಕೃಷ್ಣನೇ ಹೆಸರಿಟ್ಟಿದ್ದಾನೆಂದು ತಿಳಿಯುತ್ತಿದೆ. ಇದೆಲ್ಲವೂ ಓದುವವರಿಗೆ ಒಂದು ಕಥೆಯಂತೆ ಇದ್ದರೂ, ನಂಬಲಿಕ್ಕಾಗದಿದ್ದರೂ ಇದು ನೂರಕ್ಕೆ ನೂರು ಪಾಲು ನಡೆದ ಸತ್ಯ. ನಂಬಿರೆಂದು ಯಾರನ್ನೂ ಬಲವಂತ ಮಾಡುತ್ತಿಲ್ಲ. ಸತ್ಯವನ್ನು ಹೇಳದೆ ತಪ್ಪುವುದಿಲ್ಲ, ಆದ್ದರಿಂದ ಸಮಯ ಆಸನ್ನವಾದಾಗ ಹೇಳದೆ ತಪ್ಪಲಿಲ್ಲ. ಹಾಗೆಂದು ಮೇಲ್ನೋಟಕ್ಕೆ ಕಾಣಿಸುವ ನನ್ನನ್ನು ಈ ವಿಷಯಕ್ಕೆ ಹೊಣೆ ಮಾಡಬೇಡಿ. ನಿಜವಾಗಿ ನಿಮಗೆ ಎಷ್ಟು ತಿಳಿದಿದೆಯೋ ನನಗೂ ಅಷ್ಟೇ ತಿಳಿದಿದೆ. ಈಗ ಇದು ನಿಮಗೇ ಅಲ್ಲ ನನಗೂ ಹೊಸ ವಿಷಯವೇ. ಹೀಗೆ ನಮಗೆ ತಿಳಿಯದ ಎಷ್ಟೋ ಹೊಸ ವಿಷಯಗಳು ಆತ್ಮಕ್ಕೆ ತಿಳಿದಿವೆ. ಆತ್ಮ ತಿಳಿಸಿದರೇನೆ ಈಗ ನಮಗೆ ತಿಳಿಯುತ್ತಿದೆ.

ತೌರಾತ್ ಗ್ರಂಥವು ಮೋಷೇಗೆ ಲಭಿಸಿದೆಯೆಂದು ತಿಳಿದಿದೆಯಲ್ಲವೆ! ಇಲ್ಲೇ ಇನ್ನೊಂದು ಹೊಸ ರಹಸ್ಯವಿದೆ. ಅದೇನೆಂದರೇ! ತೌರಾತ್ ಗ್ರಂಥವನ್ನು

ಮೋಷೇ ಹೊರತು ಯಾರೂ ನೋಡಲಿಲ್ಲ. ತೌರಾತ್ ಗ್ರಂಥ ಮೋಷೇಗೆ ಮಾತ್ರವೇ ಕಾಣಿಸುತ್ತಿತ್ತು, ಇತರರಿಗೆ ಕಾಣಿಸುತ್ತಿರಲಿಲ್ಲ. ಆ ವಿಧವಾಗಿ ತೌರಾತ್ (ಭಗವದ್ಗೀತೆ) ಗ್ರಂಥ ಅಲ್ಲಿನ ಮನುಷ್ಯರಿಗೆ ರಹಸ್ಯ ಗ್ರಂಥವಾಗಿದೆ. ಆ ವಿಷಯ ಮೋಷೇಗೂ ಸಹ ಅರ್ಥವಾಗಿದೆ. ಗ್ರಂಥದಲ್ಲಿನ ಜ್ಞಾನವನ್ನು ರಾತ್ರಿ ಹೊತ್ತು ಓದಿಕೊಂಡು ಹಗಲು ಇತರರಿಗೆ ಹೇಳುತ್ತಿದ್ದನು. ಹೇಳುವುದು ಭಗವದ್ಗೀತೆಯಲ್ಲಿನ ಜ್ಞಾನವಾದ್ದರಿಂದ ಶಾಸ್ತ್ರಬದ್ಧವಾಗಿ ಇತ್ತು. ಜ್ಞಾನಕ್ಕೆ ಒರೆಕಲ್ಲಾಗಿ (ಸಾಣಿಕಲ್ಲಾಗಿ) ಇತ್ತು. ತೌರಾತ್ ಜ್ಞಾನದಿಂದ ಯಾವುದು ಜ್ಞಾನವೋ ಯಾವುದು ಅಜ್ಞಾನವೋ ತೀರ್ಮಾನಿಸಿ ಹೇಳುವುದಕ್ಕೆ ಸಾಧ್ಯವಿತ್ತು. ಆದ್ದರಿಂದ ತೌರಾತ್ ಗ್ರಂಥಕ್ಕೆ ಒರೆಕಲ್ಲು ಎನ್ನುವ ಹೆಸರು ಸಾರ್ಥಕವಾಯಿತು. ಅದೇ ಒರೆಕಲ್ಲೇ ನಮ್ಮ ಹತ್ತಿರವಿರುವ ಭಗವದ್ಗೀತೆ. ಆ ದಿನಗಳಲ್ಲಿ ಮೋಷೇಗೆ ಮಾತ್ರ ಕಾಣಿಸಿ ಇತರರಿಗೆ ಕಾಣಿಸದ ಭಗವದ್ಗೀತೆ ಈದಿನ ನಮ್ಮ ಮುಂದೆ ಜ್ಞಾನಿಗಳಿಗೂ, ಅಜ್ಞಾನಿಗಳಿಗೂ ಕಾಣಿಸುತ್ತಿದೆ. ಈದಿನ ಗ್ರಂಥ ಕಾಣಿಸಿದರೂ ಅದರಲ್ಲಿನ ಜ್ಞಾನವು ಬಹಳ ಜನರಿಗೆ ಕಾಣಿಸುತ್ತಿಲ್ಲ. ಅಂದರೆ ಅರ್ಥವಾಗುತ್ತಿಲ್ಲ.

ಮೋಷೇ ಹೇಳುವ ಜ್ಞಾನಕ್ಕೆ ಬಹಳ ಜನ ಆಕರ್ಷಿತರಾಗಿ ಆತನು ಹೇಳುವ ಜ್ಞಾನವನ್ನು ತಿಳಿಯುತ್ತಿದ್ದರು. ಮೋಷೇ ತನಗೆ ತೌರಾತ್ ಗ್ರಂಥ ಲಭಿಸಿದಾಗಿನಿಂದ 34 ವರ್ಷಗಳು ಗ್ರಂಥದಲ್ಲಿನ ಜ್ಞಾನವನ್ನೇ ಹೇಳಿದ್ದಾನೆ. ಮೋಷೇ ಹೇಳುವ ಜ್ಞಾನ ತೌರಾತ್ ಗ್ರಂಥದೊಳಗಿನದೆಂದು ಪ್ರಜೆಗಳಿಗೆ ತಿಳಿದಿಲ್ಲ. ಮೋಷೇಗೆ 54 ವರ್ಷಗಳು ಕಳೆದ ನಂತರ ಮೋಷೇ ಶರೀರದಲ್ಲಿ ಇಲ್ಲದಂತೆ ಹೋಗುವುದು, ಅದರಲ್ಲಿ ಸ್ವತಃವಾಗಿ ಕೃಷ್ಣನೇ ಇರುವುದು ಇತರರಿಗೆ ಯಾರಿಗೂ ತಿಳಿದಿಲ್ಲ. ಕೃಷ್ಣನು ಒಂಬತ್ತು ವರ್ಷಗಳು ಮೋಷೇ ಶರೀರದಲ್ಲಿ ಇದ್ದು, ಮೋಷೇ ಹೇಳುವಂತೆ ನಟಿಸಿ ಮುಂಬರುವ ಯೇಸನನ್ನು ಕುರಿತು ಆತನ ಜೀವನದಲ್ಲಿ ನಡೆಯುವ ಕೆಲವು ಸಂಘಟನೆಗಳನ್ನು ಕುರಿತು ಹೇಳುವುದು ನಡೆದಿದೆ. ಮೋಷೇ (ಕೃಷ್ಣನು) ಹೇಳಿದ ಸಂಘಟನೆಗಳು ಯೇಸು ಜೀವನದಲ್ಲಿ ನೆರವೇರಿದಂತೆ ನಾಲ್ಕು ಸುವಾರ್ತೆಗಳಲ್ಲಿ ತಿಳಿಯುತ್ತಿದೆ. ಮೋಷೇ ಯೇಸನ್ನು ಕುರಿತು ಹೇಳಿದ

ಕೆಲವು ಸಂಘಟನೆಗಳನ್ನು ತಿಳಿದುಕೊಂಡ ಯೆಷಯಾ ಅವೇ ಸಂಘಟನೆಗಳನ್ನೇ ತನ್ನ ಲೇಖನಗಳಲ್ಲಿ ಬರೆದಿದ್ದಾರೆ. ಮೋಷೇ ತೌರಾತ್ ಗ್ರಂಥದ ಜ್ಞಾನವನ್ನು ಹೇಳುವುದರಿಂದ ಆತನು ಧರ್ಮಶಾಸ್ತ್ರವನ್ನು ಹೇಳಿದ್ದಾನೆಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ಮೋಷೇ ಸ್ವತಃವಾಗಿ ಧರ್ಮಶಾಸ್ತ್ರವನ್ನು ಹೇಳಿದ್ದಾನೆಂದು ಅಂದುಕೊಂಡಿದ್ದಾರೆ. ಮೋಷೇಗೆ ಒಬ್ಬನಿಗೇ ತಿಳಿದ ತೌರಾತ್‌ನ್ನು ಮೋಷೇ ನಂತರ ಯಾರೂ ಅದನ್ನು ನೋಡಲಿಲ್ಲ. ಮೋಷೇ ಹೊರತಾಗಿ ತೌರಾತ್ ಗ್ರಂಥವನ್ನು ನೋಡಿದ ಎರಡನೆ ವ್ಯಕ್ತಿ ಇಲ್ಲವೆಂದೇ ಹೇಳಬಹುದು.

ಕೃಷ್ಣನು ಮೋಷೇ ಶರೀರದಲ್ಲಿ ಒಂಬತ್ತು ವರ್ಷಗಳಿದ್ದು ಯೇಸನ್ನು ಕುರಿತು ಮೊದಲೇ ಹೇಳುವುದು, ಆ ವಿಷಯಗಳನ್ನು ನಂತರ ತಿಳಿದ ಪ್ರವಕ್ತರು ಲೇಖನಗಳಾಗಿ ಬರೆಯುವುದು ನಡೆದಿದೆ. ಕೃಷ್ಣನು 34 ವರ್ಷಗಳ ಮೊದಲೇ ಭಗವದ್ಗೀತೆಯನ್ನು ಮೋಷೇಗೆ ಕೊಟ್ಟಿರುವುದರಿಂದ, ಆತನ ಶರೀರದೊಳಗೆ ಬಂದು ಮಾತನಾಡಬೇಕೆಂದು ನಿರ್ಣಯಿಸಿಕೊಂಡಿದ್ದಾನೆ. ಮೋಷೇಯಲ್ಲಿರುವ ಒಂಬತ್ತು ವರ್ಷಗಳ ನಂತರ ಕೃಷ್ಣನು ಶರೀರವನ್ನು ಬಿಟ್ಟು ಮೂರು ಆತ್ಮಗಳು ಏಕವಾಗಿ ದೇವರಾಗಿ ಬದಲಾಗಿಹೋಗಿದ್ದಾನೆ. ಅದೇ ದೇವರೇ ಮೂರು ಸಾವಿರ ವರ್ಷಗಳ ನಂತರ ಯೇಸುಆಗಿ ಬರುವುದು ನಡೆದಿದೆ. ಆದರೇ ಆತನನ್ನು ಇಂತಹವನೆಂದು ಯಾರೂ ಗುರುತಿಸದಂತೆ ಹೋಗಿದ್ದಾರೆ. ಕೆಲವರು ದೇವರ ಕುಮಾರನು ಎಂದಿದ್ದಾರೆ. ಕೆಲವರು ದೇವರ ದೂತ ಎಂದಿದ್ದಾರೆ. ಅಷ್ಟೇ ಹೊರತು ಶರೀರದಿಂದ ಬಂದಿರುವವನೇ ದೇವರೆಂದು, ಯಾರೂ ತಿಳಿಯಲಾರದೆ ಹೋಗಿದ್ದಾರೆ. ಯೇಸು ನಂತರ ಯೇಸು ಹೇಳಿದ ಮಾತುಗಳನ್ನನುಸರಿಸಿ ತಯಾರಾದ ಗ್ರಂಥ ಇಂಜೀಲ್. ಇಂಜೀಲ್ ಗ್ರಂಥವನ್ನು ಬೈಬಲ್ ಗ್ರಂಥವೆನ್ನುತ್ತಾರೆ. ಇಂಜೀಲ್ ಗ್ರಂಥ ತೌರಾತ್ ಗ್ರಂಥವನ್ನು ಅನುಸರಿಸಿ ತಯಾರಾಗಿದೆ. ಇಂಜೀಲ್‌ನಲ್ಲಿನ ಜ್ಞಾನ ತೌರಾತ್‌ನಲ್ಲಿನ ಜ್ಞಾನವೇ ಎಂದು ಹೇಳಬಹುದು. ಈ ವಿಷಯವನ್ನು ಅಂತಿಮ ದೈವ ಗ್ರಂಥ ಖುರಾನ್ ಸೂರಾ 5, ಆಯತ್ 46ರಲ್ಲಿ ಇದೆ. **(5-46) "ನಾವು ಮರಿಯಮ್ ಕುಮಾರನು**

**ಈಸಾನನ್ನು (ಯೇಸನ್ನು) ಕಳುಹಿಸಿದ್ದೇವೆ. ಆತನು ತನಗೆ ಪೂರ್ವದಲ್ಲಿ ಬಂದಿರುವ ತೌರಾತ್ ಗ್ರಂಥವನ್ನು ಸತ್ಯವೆಂದು ಧೃಢೀಕರಿಸುವವನು. ನಾವು ಆತನಿಗೆ ಇಂಜೀಲ್ (ಬೈಬಲ್) ಗ್ರಂಥವನ್ನು ಕೊಟ್ಟಿದ್ದೇವೆ. ಅದರಲ್ಲಿ ಮಾರ್ಗದರ್ಶಕವೂ, ಜ್ಯೋತಿ ಇವೆ. ಅದು ತನಗೆ ಮೊದಲಿರುವ ತೌರಾತ್ ಗ್ರಂಥವನ್ನು ಧೃಢೀಕರಿಸುವುದು. ಅಷ್ಟೇ ಅಲ್ಲದೆ ಅದು ದೈವಭೀತಿ ಇರುವವರಿಗೆ ಮಾರ್ಗದರ್ಶಿನಿಯಾಗಿ ಇದೆ".**

ಭಾರತದೇಶದಲ್ಲಿ ಹುಟ್ಟಿದ ಭಗವದ್ಗೀತೆ ಇತರ ದೇಶದಲ್ಲಿ ತೌರಾತ್‌ಆಗಿ ಹೇಳಲ್ಪಟ್ಟಿದೆ. ಆದರೇ ಅದು ಮೋಷೇಗೆ ಒಬ್ಬನಿಗೆ ಹೊರತು ಎಲ್ಲರಿಗೂ ಸಿಗದ ಹಣ್ಣಾಗಿದೆ. ಆದ್ದರಿಂದ ತೌರಾತ್ ಗ್ರಂಥದ ಹೆಸರು ಕೇಳಿದವರೇ ಹೊರತು ಅದನ್ನು ನೋಡಿದವರು ಯಾರೂ ಇಲ್ಲ. ಇಂಜೀಲು ಗ್ರಂಥದಲ್ಲಿ ತೌರಾತ್ ಜ್ಞಾನವಿದೆಯೆಂದು ಖುರಾನ್ ಗ್ರಂಥದಲ್ಲಿ ಬರೆಯಲಾಗಿರುವುದನ್ನು ನೋಡಿದ್ದೇವೆ. ಅಷ್ಟೇ ಅಲ್ಲದೆ ತೌರಾತ್ ಗ್ರಂಥದ ನಂತರ ಬಂದಿರುವ ಇಂಜೀಲ್‌ಗೇ ಅಲ್ಲದೆ ಖುರಾನ್‌ಗೆ ಸಹ ಆದರ್ಶವಾಗಿ ಇದೆಯೆನ್ನುವ ವಿಷಯ ಅಂತಿಮದೈವ ಗ್ರಂಥದಲ್ಲಿಯೇ ಇದೆ. ಸೂರಾ 5,ಆಯತ್ 44ನ್ನು ನೋಡಿರಿ **(5-44) "ನಾವು ತೌರಾತ್ ಗ್ರಂಥವನ್ನು ಅವತರಿಸುವಂತೆ ಮಾಡಿದ್ದೇವೆ. ಅದರಲ್ಲಿ ಮಾರ್ಗದರ್ಶಕ, ಜ್ಯೋತಿ ಇವೆ. ತೌರಾತ್ ಗ್ರಂಥ ಆಧಾರವಾಗಿಯೇ ಮುಸ್ಲೀಮ್‌ರಾದ ಪ್ರವಕ್ತರು, ರಬ್ಬಾನೀಗಳು, ಧರ್ಮವೇತ್ತರು, ಯೂದರ ಸಮಸ್ಯೆಯನ್ನು ಪರಿಷ್ಕರಿಸುವವರು." (5-48) "ನಾವು ನಿನ್ನ ಕಡೆಗೆ ಈ ಗ್ರಂಥವನ್ನು (ಖುರಾನ್) ಸತ್ಯಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತಮಗಿಂತ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ಧೃಢೀಕರಿಸುತ್ತಿದೆ. ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಅವರ (ಮನುಷ್ಯರ) ಮನೋ ಇಚ್ಛೆಗಳನ್ನು ಅನುಸರಿಸಬೇಡ." (5-68) "ನೀವು ತೌರಾತ್‌ನ್ನು, ಇಂಜೀಲನ್ನು (ಭಗವದ್ಗೀತೆ, ಬೈಬಲ್) ನಿಮ್ಮ ಪ್ರಭು ಕಡೆಯಿಂದ ನಿಮ್ಮ ಹತ್ತಿರಕ್ಕೆ ಕಳುಹಿಸಲ್ಪಟ್ಟಿರುವ ಖುರಾನ್ ಗ್ರಂಥವನ್ನು ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದಮೇಲೆ ಇಲ್ಲದಂತೇ."**

ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಬರೆದ ವಾಕ್ಯಗಳನ್ನು ಅನುಸರಿಸಿ ನಂತರ ಬಂದಿರುವ ಎರಡು ದೈವ ಗ್ರಂಥಗಳಲ್ಲಿ ಮೊದಲ ದೈವಗ್ರಂಥವೊಂದರ ಜ್ಞಾನವೇ ಇದೆಯೆಂದು ಅರ್ಥವಾಗುತ್ತಿದೆ. ಆದ್ದರಿಂದ ಮೂರು ದೈವ ಗ್ರಂಥಗಳನ್ನು ಓದದೇ ಯಾವ ಧರ್ಮದಲ್ಲೂ ಇಲ್ಲದಂತೆ ಎಂದು ಕೂಡಾ ಹೇಳಿದ್ದಾರೆ. ತೌರಾತ್ ಗ್ರಂಥವೊಂದರ ಹೆಸರನ್ನು ಮೋಷೇ ಸಹ ಹೊರಗೆ ಹೇಳಲಿಲ್ಲ. ಅದು ರಹಸ್ಯವಾಗಿ ನಿಂತುಹೋದ ಗ್ರಂಥವೆಂದು ಹೇಳಿದ್ದಾನೆ. ತೌರಾತ್ ಗ್ರಂಥ ಮೋಷೇಗೆ ಕೊಟ್ಟಾಗ ಗ್ರಂಥದ ಹೆಸರು ತೌರಾತ್‌ಯೆಂದು ಮೋಷೇ ಕೇಳಿಸಿಕೊಂಡಿದ್ದಾನೆ. ಆ ಗ್ರಂಥ ಸ್ವಪ್ನದಲ್ಲಿ ಸಿಕ್ಕಿರುವ ಗ್ರಂಥ. ಮೋಷೇಗೆ ಹೊರತು ಇತರರಿಗೆ ಕಾಣಿಸದ ಗ್ರಂಥ. ಬೈಬಲ್‌ನ್ನು ಕುರಿತು ಮೋಷೇ ಧರ್ಮಶಾಸ್ತ್ರವೆಂದು ಹೇಳಿದ್ದಾರೆ ಹೊರತು ಹೆಸರು ಹೇಳಲಿಲ್ಲ. ಅತಿ ರಹಸ್ಯವಾದ ತೌರಾತ್ ಗ್ರಂಥದ ಹೆಸರನ್ನು ಖುರಾನ್ ಗ್ರಂಥ ಹೊರಗಿಟ್ಟಿದೆ. ಖುರಾನ್ ಗ್ರಂಥ ತೌರಾತ್ ಗ್ರಂಥದ ಹೆಸರನ್ನು ಹೇಳದೇ ಹೋಗಿದ್ದರೇ ಆ ಹೆಸರು ಪ್ರಪಂಚಕ್ಕೆ ತಿಳಿಯುತ್ತಿರಲಿಲ್ಲವೇನೋ! ಆದರೇ ತೌರಾತ್ ಗ್ರಂಥವೇ ಭಗವದ್ಗೀತೆ ಯೆಂದು ತಿಳಿಯದ ರಹಸ್ಯವಾಗಿ ಇದೆ. ಸಮಯ ಆಸನ್ನವಾಗುತ್ತಿದ್ದಂತೆ ತಿಳಿಯದ ರಹಸ್ಯಗಳನ್ನು ಆತ್ಮೇ ತಿಳಿಸಬೇಕಾಗಿದೆ.

**ಪ್ರಶ್ನೆ :– ಅಂತಿಮದೈವ ಗ್ರಂಥವಾದ ಖುರಾನ್‌ನಲ್ಲಿ ತೌರಾತ್ ಗ್ರಂಥವನ್ನು ಮೂಸಾಗೆ ಕೊಟ್ಟಂತೆ ಮಹಾಜ್ಞಾನಿ ಜಿಬ್ರಯೇಲ್ ಹೇಳಿದ್ದಾನೆ. ನೀವು ಬೈಬಲ್‌ನಲ್ಲಿ ಪ್ರವಕ್ತ ಆದ ಮೋಷೇ ಹೆಸರನ್ನು ಹೇಳಿ ತೌರಾತ್‌ನ್ನು ಆತನಿಗೆ ಅನುಸಂಧಾನ ಮಾಡಿದ್ದೀರ. ಖುರಾನ್ ಗ್ರಂಥದಲ್ಲಿ ಮೋಷೇ ಹೆಸರೇ ಇಲ್ಲ, ಇದಕ್ಕೆ ನೀವೇನನ್ನುತ್ತೀರಾ?**

**ಉತ್ತರ :–** ದ್ವಿತೀಯ ದೈವ ಗ್ರಂಥವನ್ನು ಖುರಾನ್‌ನಲ್ಲಿ ಇಂಜೀಲು ಎಂದು ಕರೆದಿದ್ದಾರೆ. ಇಂಜೀಲನ್ನೇ ಹೊರಗಿನ ಪ್ರಪಂಚದಲ್ಲಿನ ಕ್ರೈಸ್ತರೆಲ್ಲರೂ ಬೈಬಲ್ ಎಂದು ಅನ್ನುತ್ತಿದ್ದಾರೆ. ಖುರಾನ್‌ನಲ್ಲಿ ಇಂಜೀಲು ಹೇಗೆ ಬೈಬಲ್‌ಆಗಿ ಹೆಸರು ಬದಲಾಗಿದೆಯೋ ಹಾಗೆಯೇ ಬೈಬಲ್‌ನಲ್ಲಿ ಮೋಷೇಯಾಗಿ ಹೇಳಲ್ಪಡುವ

ವ್ಯಕ್ತಿ ಖುರಾನ್ ಗ್ರಂಥದಲ್ಲಿ ಮೂಸಾ ಆಗಿ ಹೇಳಲ್ಪಟ್ಟಿದ್ದಾನೆ. ಮೋಷೇ ಎಂದರೂ ಮೂಸಾ ಎಂದರೂ ಇಬ್ಬರೂ ಒಬ್ಬನೇ ಎಂದು ತಿಳಿಯಬೇಕು.

**ಪ್ರಶ್ನೆ :– ನೀವು ಹೇಳಿದ ಮೋಷೇ ವಿಷಯವನ್ನು, ಮೋಷೇಗೆ ತೌರಾತ್ ಗ್ರಂಥವನ್ನು ಕೊಟ್ಟಿರುವ ವಿಷಯವನ್ನು ಹೊಸದಾಗಿ ಕೇಳಿದ್ದೇವೆ. ನೀವು ಹೇಳಿರುವುದು ಬಹಳ ರಹಸ್ಯವಾದ ವಿಷಯ. ಇದು ಯಾರ ಊಹೆಗೂ ಸಹ ಸಿಗದ ವಿಷಯ. ಅಷ್ಟು ದೊಡ್ಡ ರಹಸ್ಯವನ್ನು ನೀವು ಸುಲಭವಾಗಿ ಒಂದು ಕಥೆಯಂತೆ ಹೇಳಿದ್ದೀರ. ನೀವು ಹೇಳಿರುವುದು ಸತ್ಯವೇ ಆದರೂ ನಮ್ಮಲ್ಲಿ ಯಾವುದೋ ಅನುಮಾನವಾಗಿ ಇದೆ. ಆ ಅನುಮಾನ ಕೂಡಾ ಬಗೆಹರಿಯುವುದಕ್ಕೆ ತಕ್ಕ ಆಧಾರ ಏನಾದರೂ ಖುರಾನ್ ಗ್ರಂಥದಲ್ಲಾಗಲೀ, ಬೈಬಲ್ ಗ್ರಂಥದಲ್ಲಾಗಲೀ ಇದೆಯಾ?**

**ಉತ್ತರ :–** ಭಗವದ್ಗೀತೆ (ತೌರಾತ್) ಗ್ರಂಥವನ್ನು ಮೋಷೇಗೆ ಕೊಡುವುದು ನಡೆದಿದೆ ಆದರೆ, ತೌರಾತ್‌ನಲ್ಲಿನ ಜ್ಞಾನವನ್ನು ನೇರವಾಗಿ ಅಲ್ಲಾಹ್ ಮೋಷೇಗೆ ಕೊಡಲಿಲ್ಲ. ಆದ್ದರಿಂದ ನಾನು ಯಾವ ಮಾನವನ ಮೇಲೆ ನನ್ನ ಜ್ಞಾನವನ್ನು ಅವತರಿಸುವಂತೆ ಮಾಡಲಿಲ್ಲ ಎಂದು ಸ್ವತಃವಾಗಿ ದೇವರೇ ಹೇಳುತ್ತಿದ್ದಾನೆ. ಈ ವಿಷಯ ನಿಮಗೆ ತಿಳಿಯಬೇಕೆಂದರೆ ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಸೂರಾ ಆರು, ಆಯತ್ 91ರಲ್ಲಿ ಬರೆದ ವಿಷಯವನ್ನು ನೋಡಿರಿ. **(6-91) "ದೇವರು ಯಾವ ಮಾನವನ ಮೇಲೆಯೂ ಎಂತಹ ಜ್ಞಾನ ವಿಷಯವನ್ನು ಅವತರಿಸುವಂತೆ ಮಾಡಲಿಲ್ಲ ಎಂದು ಹೇಳಿದಾಗ ಈ ಅವಿಶ್ವಾಸ ಜನರು ದೇವರನ್ನು ಅರ್ಥ ಮಾಡಿಕೊಳ್ಳಬೇಕಾದ ವಿಧದಲ್ಲಿ ಅರ್ಥ ಮಾಡಿಕೊಳ್ಳಲಿಲ್ಲ. ಅವರನ್ನು ಕೇಳು ಮೂಸ ತಂದಿರುವ ತೌರಾತ್ ಗ್ರಂಥವನ್ನು ಯಾರು ಅವತರಿಸುವಂತೆ ಮಾಡಿದಹಾಗೆ? ಆ ಗ್ರಂಥ ಒಂದು ಜ್ಯೋತಿ. ಮಾನವರಿಗಾಗಿ ಮಾರ್ಗದರ್ಶಕತ್ವ ನೀವು ಅದನ್ನು ಬೇರೆಬೇರೆ ಗ್ರಂಥಗಳಾಗಿ ವಿಭಜಿಸಿ ತೋರಿಸುತ್ತಿದ್ದೀರ, ಎಷ್ಟೋ ವಿಷಯಗಳು ಬಚ್ಚಿಡುತ್ತಿದ್ದೀರ. ನಿಮಗಾಗಲೀ ನಿಮ್ಮ ಹಿರಿಯರಿಗಾಗಲೀ ತಿಳಿಯದ ಎಷ್ಟೋ ವಿಷಯಗಳು ಇದರ ಮೂಲವಾಗಿ ನಿಮಗೆ ತಿಳಿಸಲಾಗಿವೆ. ತೌರಾತ್‌ನ್ನು ಅವತರಿಸುವಂತೆ**

**ಮಾಡಿದವನು ಅಲ್ಲಾಹ್‌ಯೇ ಎಂದು ಹೇಳು. ಆ ನಂತರ ಅವರನ್ನು ಅವರ ವ್ಯರ್ಥ ವಿಷಯಗಳಲ್ಲಿಯೇ ಆಡಿಕೊಳ್ಳಲು ಬಿಡು"** ಎಂದು ಇದೆ.

ಈ ವಾಕ್ಯವನ್ನು ನೋಡಿದರೇ ದೇವರು ತನ್ನ ಜ್ಞಾನವನ್ನು ಯಾರ ಮೇಲೂ ಪ್ರಸರಿಸುವಂತೆ ಮಾಡಲಿಲ್ಲವೆಂದು ಅರ್ಥವಾಗುತ್ತಿದೆ. ಅಷ್ಟೇ ಅಲ್ಲದೆ ಇಲ್ಲೇ ಮೂಸಾ ತಂದಿರುವ ಆ ತೌರಾತ್ ಗ್ರಂಥವನ್ನು ಯಾರು ಅವತರಿಸುವಂತೆ ಮಾಡಿದಹಾಗೆ? ಎಂದು ಪ್ರಶ್ನಿಸಿ ಅದಕ್ಕೆ ಉತ್ತರವನ್ನು ಸಹ ಈ ವಾಕ್ಯದಲ್ಲಿಯೇ ತೌರಾತ್‌ನ್ನು ಅವತರಿಸುವಂತೆ ಮಾಡಿದವನು ಅಲ್ಲಾಹ್‌ಯೇ (ದೇವರೇ) ಎಂದು ಹೇಳಿದ್ದಾನೆ. ಇದನ್ನನುಸರಿಸಿ ತೌರಾತ್ ಗ್ರಂಥ ಮೂಸಗೆ ಕೊಡಲಾಗಿದೆ ಆದರೆ, ಅದರಲ್ಲಿನ ದೇವರ ಜ್ಞಾನವನ್ನು ಕೊಡಲಿಲ್ಲವೆಂದು, ದೇವರೇ ಜ್ಞಾನವನ್ನು ತಿಳಿದವನೆಂದು ಅರ್ಥವಾಗುತ್ತಿದೆ. ಮೂಸ ಎಂದರೆ ಮೋಷೇಯೆಂದು ಅರ್ಥ ಮಾಡಿಕೊಳ್ಳಬೇಕು. ತೌರಾತ್ ಗ್ರಂಥದಲ್ಲಿನ ಜ್ಞಾನವನ್ನು ಮೂಸಾ ಕಲಿತುಕೊಂಡಿದ್ದಾನೆ ಆದರೆ ಜ್ಞಾನ ಸ್ವತಃವಾಗಿ ಆತನಲ್ಲಿ ಹುಟ್ಟಲಿಲ್ಲ. ಜ್ಞಾನಕ್ಕೆ ಹುಟ್ಟುವ ಸ್ಥಾನ ದೇವರೇಯೆಂದು ಈ ವಾಕ್ಯದಿಂದ ಅರ್ಥವಾಗುತ್ತಿದೆ. ತೌರಾತ್ ಗ್ರಂಥ ಜ್ಞಾನ ಜ್ಯೋತಿಯೆಂದು, ಪ್ರತಿ ಮಾನವನಿಗೂ ಮಾರ್ಗದರ್ಶಕವೆಂದು ಕೂಡಾ ಈ ವಾಕ್ಯದಲ್ಲಿಯೇ ಹೇಳಿದ್ದಾನೆ. ಅಷ್ಟೇ ಅಲ್ಲದೆ ತೌರಾತ್ ಗ್ರಂಥ (ಭಗವದ್ಗೀತೆ ಗ್ರಂಥ) ವೊಂದರ ಜ್ಞಾನ ಬೇರೆಬೇರೆ ಗ್ರಂಥಗಳಾಗಿ ಇದೆಯೆಂದು ಅಂದರೆ ಬೈಬಲ್, ಖುರಾನ್ ರೂಪದಲ್ಲಿ ಇದೆಯೆಂದು ಹೇಳುವುದಾಗಿದೆ. ಇದೆಲ್ಲವೂ ನಾವು ಹೇಳಿದ ವಿಷಯಕ್ಕೆ ಆಧಾರ ಅಲ್ಲವಾ! ಎಂದು ತಿಳಿಸುತ್ತಿದ್ದೇವೆ.

ದ್ವಿತೀಯ ದೈವಗ್ರಂಥವಾದ ಬೈಬಲ್‌ನ್ನು ಪರಿಶೀಲಿಸಿ ನೋಡಿದರೇ ನಮ್ಮ ಮಾತು ಸತ್ಯವೆನ್ನುವುದಕ್ಕೆ ಆಧಾರ ಸಿಗುತ್ತದೆ. ಯೋಹಾನ ಸುವಾರ್ತೆ, ಆರನೆ ಅಧ್ಯಾಯ 32, 33 ವಾಕ್ಯಗಳನ್ನು ನೋಡಿರಿ (ಯೋಹಾನ 6–32, 33) **ಪರಲೋಕದಿಂದ ಬರುವ ಆಹಾರ (ಜ್ಞಾನ) ಮೋಷೇಗೆ ಕೊಡಲ್ಪಡಲಿಲ್ಲ. ನನ್ನ ತಂದೆಯೇ ಪರಲೋಕದಿಂದ ಬರುವ ನಿಜವಾದ ಆಹಾರವನ್ನು ನಿಮಗೆ**

**ಅನುಗ್ರಹಿಸುತ್ತಿದ್ದಾನೆ. ಲೋಕಕ್ಕೆ ಜೀವ (ಬೆಳಕು) ಕೊಡುವುದು ದೇವರನುಗ್ರಹಿಸುವ ಆಹಾರವಾಗಿ ಇದೆಯೆಂದು ನಿಮ್ಮೊಂದಿಗೆ ನಿಶ್ಚಯದಿಂದ ಹೇಳುತ್ತಿದ್ದೇನೆ.** ಈ ವಾಕ್ಯಗಳನ್ನನುಸರಿಸಿ ನೋಡಿದರೆ ಮೋಷೇಗೆ ಧರ್ಮವಾದ ಜ್ಞಾನವನ್ನು ಕೊಡಲಿಲ್ಲವೆಂದು, ಗ್ರಂಥವನ್ನು ಮಾತ್ರ ಕೊಟ್ಟಿದ್ದಾನೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಮೋಷೇ ಶರೀರದಲ್ಲಿ ಕೃಷ್ಣನು ಇದ್ದ ಒಂಬತ್ತು ವರ್ಷಗಳು ಯೇಸುನನ್ನು ಕುರಿತ ಸಮಾಚಾರವನ್ನು ಹೇಳಿದ್ದಾನೆಂದು ವಿಶ್ವಾಸಿಸುವುದಕ್ಕೆ, ನಮ್ಮ ಮಾತು ಸತ್ಯವೆಂದು ನಂಬುವುದಕ್ಕೆ ಯೋಹಾನ ಐದನೆ ಅಧ್ಯಾಯದಲ್ಲಿ 46, 47 ವಾಕ್ಯಗಳನ್ನು ನೋಡಿರಿ (**ಯೋಹಾನ 5-46,47**) **"ಆತನು ನನ್ನನ್ನು ಕುರಿತು ಬರೆದನು ಆದ್ದರಿಂದ ನೀವು ಮೋಷೇಯನ್ನು ನಂಬಿದಂತಾದರೆ ನನ್ನನ್ನು ನಂಬುತ್ತೀರ. ನೀವು ಆತನ ಲೇಖನಗಳನ್ನು ನಂಬದ ಪಕ್ಷದಲ್ಲಿ ನನ್ನ ಮಾತುಗಳನ್ನು ಹೇಗೆ ನಂಬುತ್ತೀರ ಎಂದನು."** ಈ ವಾಕ್ಯಗಳನ್ನು ನೋಡಿದ ನಂತರ ಈಗ ಮಾತನಾಡುವ ಯೇಸೇ, ಆಗ ಮೋಷೇ ಶರೀರದಲ್ಲಿ ಇರುವಂತೆ ಅರ್ಥವಾಗುತ್ತದೆ. ನೀವು ಮೋಷೇಯನ್ನು ನಂಬಿದರೇ ನನ್ನನ್ನು ನಂಬಿದಂತೆ. ಆತನನ್ನು ನಂಬದೇ ಹೋದರೇ ನನ್ನನ್ನು ನಂಬದಂತೆ ಎನ್ನುವುದರಲ್ಲಿ ಈಗ ಯೇಸುಯಾಗಿ ಬಂದಿರುವವನು, ಆಗ ಮೋಷೇಯಾಗಿ ಇರುವವನು ಇಬ್ಬರು ಒಂದೇಯೆಂದು ಹೇಳದೇ ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಮೋಷೇ ರೂಪದಲ್ಲಿ ಇರುವಾಗ ಭಗವಂತನು ಹೇಳಿದ ಮಾತುಗಳನ್ನು ನಂತರ ಇತರರು ಲೇಖನಗಳಾಗಿ ಬರೆದಿದ್ದಾರೆಂದು ನಾನು ಹೇಳಿದ ಮಾತು ವಾಸ್ತವವೆನ್ನುವುದಕ್ಕೆ ಆಧಾರವಾಗಿ ಲೂಕಾ ಸುವಾರ್ತೆ 24ನೇ ಅಧ್ಯಾಯ 44ನೇ ವಚನದಲ್ಲಿ ಬರೆದಿರುವುದನ್ನನುಸರಿಸಿ ತಿಳಿಯುತ್ತಿದೆ. (**ಲೂಕಾ 24-44**) **"ಮೋಷೇ ಧರ್ಮಶಾಸ್ತ್ರದಲ್ಲಿಯೂ, ಪ್ರವಕ್ತರ ಗ್ರಂಥಗಳಲ್ಲಿಯೂ, ಕೀರ್ತನೆಗಳಲ್ಲಿಯೂ ನನ್ನನ್ನು ಕುರಿತು ಬರೆಯಲಾಗಿರುವವೆಲ್ಲವೂ ನೆರವೇರಬೇಕೆಂದು ನಾನು ನಿಮ್ಮ ಹತ್ತಿರ ಇದ್ದಾಗ ನಿಮ್ಮೊಂದಿಗೆ ಹೇಳಿದ ಮಾತುಗಳು ನೆರವೇರಿವೆಯೆಂದು ಅವರೊಂದಿಗೆ ಹೇಳಿದನು"** ಈ ವಿಧವಾಗಿ

ಬೈಬಲ್ ವಾಕ್ಯಗಳನ್ನನುಸರಿಸಿ, ಖುರಾನ್ ವಾಕ್ಯಗಳನ್ನನುಸರಿಸಿ ನಮ್ಮ ಮಾತುಗಳು ವಾಸ್ತವವೆಂದು ನಿರೂಪಣೆಗೆ ಬರುತ್ತಿವೆ.

**ಪ್ರಶ್ನೆ :– ಭಾರತದೇಶದಲ್ಲಿ ದ್ವಾಪರ ಯುಗದಲ್ಲಿ ಭಗವದ್ಗೀತೆ ತಯಾರಾಗಿದೆ. ಭಗವದ್ಗೀತೆಯನ್ನು ಕೃಷ್ಣನು ಹೇಳಿದಾಗ ಅದು ಸೃಷ್ಠಿ ಆದಿಯಲ್ಲಿನ ಜ್ಞಾನವೆಂದು ಅರ್ಜುನನಿಗೆ ಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ ಮೊದಲ ಶ್ಲೋಕದಲ್ಲೇ ಹೇಳಿದ್ದಾನೆ. ನಿಮ್ಮ ಮಾತಿನ ಪ್ರಕಾರ ಎಂದಿಗೂ ದೇವರು ಒಬ್ಬನೇ, ದೇವರ ಜ್ಞಾನ ಒಂದೇ ಇರುತ್ತದೆಂದು ನಮಗೆ ಅರ್ಥವಾಗಿದೆ. ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನಕ್ಕೆ 'ಜಪರ' ಎಂದು ಹೆಸರಿತ್ತೆಂದು ಅದನ್ನೇ ಖುರಾನ್‌ನಲ್ಲಿ ಸ್ವಲ್ಪ ಬದಲಾಯಿಸಿ 'ಜಬುರ' ಎನ್ನುವ ಹೆಸರಿನಿಂದ ಹೇಳಿದ್ದಾರೆ. ಹಾಗೆಯೇ ಮೋಷೇಯನ್ನು ಮೂಸಾ ಎಂದಿದ್ದಾರೆಂದು, ಬೈಬಲ್‌ನ್ನು ಇಂಜೀಲ್ ಎಂದು ಹೇಳಿದ್ದಾರೆಂದು, ಯೇಸನ್ನು ಈಸಾ ಎಂದು ಹೇಳಿದ್ದಾರೆಂದು ನೀವು ಅನೇಕ ಸಂದರ್ಭಗಳಲ್ಲಿ ಹೇಳಿದ್ದೀರ. ಅವುಗಳನ್ನು ಸ್ವಲ್ಪ ವ್ಯತ್ಯಾಸದಿಂದ ಹೇಳಿದರೂ ಫರವಾಗಿಲ್ಲ ಆದರೆ, ದೇವರ ಜ್ಞಾನವಾದ ಭಗವದ್ಗೀತೆಗೆ ಏಕೆ ಹೆಸರು ಬದಲಾಯಿಸಿದ್ದೀರ? ಮನುಷ್ಯರು ಬದಲಾಯಿಸಿದ್ದರೇ ಇದು ಮನುಷ್ಯರಿಗೆ ಅಭ್ಯಾಸವೇ ಎಂದು ಅಂದುಕೊಳ್ಳುತ್ತಿದ್ದೆವು. ಮನುಷ್ಯರು ಅಲ್ಲದೆ ಭಗವಂತನಾದ ಕೃಷ್ಣನೇ ತಾನು ಹೇಳಿದ ಭಗವದ್ಗೀತೆಗು ತೌರಾತ್‌ಯೆಂದು ಹೆಸರು ಬದಲಾಯಿಸಿ ಏಕೆ ಹೇಳಿದ್ದಾನೆ? ಹಾಗೆ ಹೇಳುವುದರಿಂದ ದೇವರ ಏಕತ್ವದ ಮೇಲೆ ಅನುಮಾನ ಉಂಟಾಗುವುದಕ್ಕೆ ಅವಕಾಶವಿರುತ್ತದೆ ಅಲ್ಲವೆ! ಎಂದು ಪ್ರಶ್ನಿಸುತ್ತಿದ್ದೇವೆ?**

**ಉತ್ತರ :–** ಮೋಷೇಯನ್ನು ಮೂಸಾ ಆಗಿ ಹೇಳುವುದರಲ್ಲಿ ತಪ್ಪಿಲ್ಲ. ಕಾಲಕ್ರಮದಲ್ಲಿ ಸ್ವಲ್ಪ ಬದಲಾವಣೆ ನಡೆದಿರಬಹುದು. ಬೈಬಲ್‌ನ್ನು ಇಂಜೀಲು ಎಂದು ಹೇಳುವುದರಲ್ಲಿ ಸಮಸ್ಯೆ ಇಲ್ಲ. ಯೇಸುನನ್ನು ಈಸಾ ಎಂದೂ, ಜಪರವನ್ನು ಜಬುರ ಎಂದೂ ಹೇಳುವುದರಲ್ಲಿ ಕಾಲಕ್ರಮದಲ್ಲಿ ಬದಲಾಗಿರಬಹುದೆಂದು ಅಂದುಕೊಳ್ಳುತ್ತೇವೆ. ಆದರೇ ಭಗವದ್ಗೀತೆ ವಿಷಯದಲ್ಲಿ ಕಾಲಗಮನ ನಡೆದಿಲ್ಲ. ಹೇಳಿರುವುದು ಇತರರು ಅಲ್ಲ ಭಗವದ್ಗೀತೆಯೆಂದು ಭಾರತದೇಶದಲ್ಲಿ ಹೆಸರು

ಇಟ್ಟಾಗಲೇ ಅದು ಇತರ ದೇಶವಾದ ಇಸ್ರಾಯೇಲ್ ಪ್ರಾಂತದೊಳಗೆ ಸೇರಿಸಲಾಗಿದೆ. ಆಗ ಕಾಲಗಮನ ಕೂಡಾ ನಡೆಯಲಿಲ್ಲ. ಭಗವದ್ಗೀತೆಯನ್ನು ಹೇಳಿದವನೇ ಹೆಸರು ಬದಲಾಯಿಸಿ ಕೊಡುವುದರಲ್ಲಿ ಕೃಷ್ಣನು ಉದ್ದೇಶ ಪೂರ್ವಕವಾಗಿ ಹೆಸರು ಬದಲಾಯಿಸಿದ್ದಾನೆಂದು ತಿಳಿಯುತ್ತಿದೆ. ಹಾಗೆ ಬದಲಾಯಿಸುವುದರಲ್ಲಿ ಆತನ ಉದ್ದೇಶ ಏನಾಗಿರುತ್ತದೆಂದು ಆಲೋಚಿಸಿ ದಂತಾದರೇ ಭಗವದ್ಗೀತೆ ಜ್ಞಾನವೇ ಮೋಷೇಗೆ ತಿಳಿದಂತೆ ಮೋಷೇಗಾಗಲೀ, ಇತರರಿಗಾಗಲೀ ಯಾರಿಗೂ ತಿಳಿಯಬಾರದೆಂದೇ ಕೃಷ್ಣನು ಹಾಗೆ ಹೇಳಿದ್ದಾನೆಂದು ಅರ್ಥವಾಗುತ್ತಿದೆ. ಮೋಷೇವರೆಗೇ ತೌರಾತ್ ಜ್ಞಾನವಿದ್ದು ನಂತರ ತಿಳಿಯದಂತೆ ಹೋಗಬೇಕೆಂದರೇ ಭಗವದ್ಗೀತೆಯೇ ತೌರಾತ್ ಎಂದು ಯಾರಿಗೂ ತಿಳಿಯಬಾರದು. ಭಗವದ್ಗೀತೆ ಕಲಿಯುಗದಲ್ಲಿ ಐದು ಸಾವಿರ ವರ್ಷಗಳು ಕಳೆಯುವವರೆಗು ಪ್ರಕಾಶಿಸಬಾರದೆಂದು ಮೊದಲೇ ದೇವರ ನಿರ್ಣಯವಿರುವು ದರಿಂದ ಭಗವದ್ಗೀತೆ ಜ್ಞಾನವಿದುಯೆಂದು ತಿಳಿಯದಂತಿರುವು ದಕ್ಕೆ ಭಗವಂತನು ಹಾಗೆ ಹೆಸರು ಬದಲಾಯಿಸಿ ಹೇಳುವುದಾಗಿದೆ.

ಭಗವದ್ಗೀತೆಗೆ ಹೆಸರಲ್ಲಿಯೇ ಭಗವಂತನು ಗೀಚಿದ ಹದ್ದುಯೆಂದು ಅರ್ಥವಿರುವಾಗ, ತೌರಾತ್ ಗ್ರಂಥಕ್ಕೂ ಸಹ ಹೆಸರಿಗೆ ತಕ್ಕ ಅರ್ಥವನ್ನು ಹೇಳುವುದು ನಡೆದಿದೆ. ತೌರಾತ್ ಎಂದರೆ ಮೂರು ರಾತ್ರಿಗಳೆಂದು ಅರ್ಥ. ರಾತ್ರಿ ಎಂದರೆ ಕತ್ತಲಿಂದ ಕೂಡಿಕೊಂಡಿರುವುದೆಂದು, ಏನೂ ಕಾಣಿಸದ ಕತ್ತಲನ್ನು ರಾತ್ರಿ ಎನ್ನುತ್ತಾರೆಂದು ಹೇಳುತ್ತಾ, ಶರೀರದಲ್ಲಿನ ಮೂರು ಆತ್ಮಗಳು ಯಾರಿಗೂ ತಿಳಿಯದಂತೆ ಇರುವುದರಿಂದ ಮೂರು ಆತ್ಮಗಳನ್ನು ಉದ್ದೇಶಿಸಿ ಮೂರು ರಾತ್ರಿಗಳೆಂದು ಅರ್ಥಬರುವಂತೆ ತೌರಾತ್ ಎಂದು ಕರೆದಿದ್ದಾನೆ. ತೌರಾತ್ ಎಂದರೆ ಮೂರು ತಿಳಿಯದ ರಾತ್ರಿಗಳೆಂದು ಅಥವಾ ರಾತ್ರಿಗಳ ಹಾಗೆ ಇರುವ ಮೂರು ತಿಳಿಯದ ಆತ್ಮಗಳು ಎಂದು ಅರ್ಥ. ಭಗವದ್ಗೀತೆ ಮುಖ್ಯ ಉದ್ದೇಶ ಕ್ಷರ, ಅಕ್ಷರ, ಪುರುಷೋತ್ತಮ ಎನ್ನುವ ಮೂರು ಆತ್ಮಗಳು ತಿಳಿಯದೆ ಇವೆಯೆಂದು, ಅವುಗಳನ್ನು ತಿಳಿಸುವ ನಿಮಿತ್ತ ಹಾಗೆ ತೌರಾತ್‌ಯೆಂದು

ಕರೆದಿದ್ದಾರೆ. ಜೀವಾತ್ಮ (ಕ್ಷರ), ಆತ್ಮ (ಅಕ್ಷರ), ಪುರುಷೋತ್ತಮ (ಪರಮಾತ್ಮ) ಎನ್ನುವ ಮೂರು ಆತ್ಮಗಳು ಕತ್ತಲಲ್ಲಿದ್ದು ಕಾಣಿಸದಂತೆ ಇರುವುದರಿಂದ ಆ ವಿಷಯ ಹೆಸರಿನಲ್ಲಿಯೇ ಅರ್ಥವಾಗುವಂತೆ ತೌರಾತ್‌ಯೆಂದು ಹೇಳುವುದಾಗಿದೆ. ತಿಳಿಯದ ಆತ್ಮಗಳು ಮೂರು ಆಗಿರುವುದರಿಂದ ತೌರಾತ್‌ಯೆಂದು ಹೇಳಿದ್ದಾರೆ. ಮೂರು ಆತ್ಮಗಳನ್ನು ತಿಳಿಯುವುದಕ್ಕೆ ಆತ್ಮಜ್ಞಾನ ಎನ್ನುವುದು ಅವಶ್ಯಕ. ಹಾಗೆಯೇ ಮೂರು ಆತ್ಮಗಳನ್ನು ಮೂರು ರಾತ್ರಿಗಳಾಗಿ ಹೇಳುವುದರಿಂದ ಕತ್ತಲನ್ನು ಇಲ್ಲದಂತೆ ಮಾಡುವುದಕ್ಕೆ ಹೇಗೆ ಬೆಳಗುತ್ತಿರುವ ಜ್ಯೋತಿ ಅವಶ್ಯಕವೋ, ಹಾಗೆಯೇ ಪ್ರಜ್ವಲಿಸುತ್ತಿರುವ ಜ್ಞಾನ ಅಜ್ಞಾನವೆನ್ನುವ ಕತ್ತಲನ್ನು ಇಲ್ಲದಂತೆ ಮಾಡುವುದು ಅವಶ್ಯಕ. ಹಾಗೆ ಮಾಡಿದಾಗ ಯಾರಿಗಾದರೂ ಮೂರು ಆತ್ಮಗಳು ತಿಳಿಯುತ್ತವೆ. ಅಲ್ಲಿಯವರೆಗು ಮೂರು ಆತ್ಮಗಳು ತಿಳಿಯದವುಗಳಾಗಿ ಇರುವುದರಿಂದ ಅವುಗಳನ್ನು ಅರ್ಥಸಹಿತವಾಗಿ ಮೂರು ರಾತ್ರಿಗಳೆಂದು ಹೇಳಿದ್ದಾರೆ. ಆ ಮಾತುಗಳನ್ನೇ ತೌರಾತ್ ಎಂದು ಕೂಡಾ ಕರೆದಿದ್ದಾರೆ. ದೇವರು ಶರೀರವನ್ನು ಧರಿಸಿ ಬಂದರೇ ಭಗವಂತನೆಂದು ಕರೆಯಲ್ಪಡುತ್ತಾನೆ. ಹಾಗೆಯೇ ಭಗವಂತನು ಹೇಳಿರುವುದು ಮಾನವನಿಗೆ ಹದ್ದುಗಳೊಂದಿಗೆ ಕೂಡಿಕೊಂಡ ಜ್ಞಾನವಾಗುವುದರಿಂದ, ಅದೇ ಅರ್ಥದಿಂದ ಭಗವದ್ಗೀತೆಯೆಂದು ಹೇಳಲಾಗಿದೆ. ಭಗವದ್ಗೀತೆ ಐದುಸಾವಿರ ವರ್ಷಗಳ ಸಮಯದಲ್ಲಿ ಹೇಳಿದರೂ ಇಂದಿಗೂ ಯಾರಿಗೂ ತಿಳಿಯದಂತೆ ಇದ್ದುಹೋಗಿದೆ. ಈ ದೇಶದಲ್ಲೇ ಅಲ್ಲದೆ ನೆರೆ ದೇಶದಲ್ಲಿ ಕೂಡಾ ಭಗವದ್ಗೀತಾ ಜ್ಞಾನ ತಿಳಿಯದಂತೆ ಇರಬೇಕೆನ್ನುವ ಉದ್ದೇಶದಿಂದಲೇ ಹೆಸರು ಬದಲಾಯಿಸಿ ಹೇಳುವುದು ನಡೆದಿದೆ. ಇಲ್ಲಿಗೆ ಐದುಸಾವಿರ ವರ್ಷಗಳು ಪೂರ್ತಿ ಆಗಿರುವುದರಿಂದ ಭಗವದ್ಗೀತಾ ಜ್ಞಾನ ಹೊರಗೆ ಬರಬೇಕಾಗಿದೆ. ಆದ್ದರಿಂದ ತೌರಾತ್‌ಗೆ ಈಗ ಅರ್ಥ ತಿಳಿದಿದೆ.

**ಪ್ರಶ್ನೆ :– ಸಮಯ ಆಸನ್ನವಾಗಿದೆಯೆಂದು ಅನ್ನುತ್ತಿದ್ದೀರ. ಯಾವುದಕ್ಕೆ ಸಮಯ ಎಂದು ಸಂಶಯವೇರ್ಪಟ್ಟಿದೆ. ಸಮಯವಾಸನ್ನವಾಗಿದೆಯೆಂದು ನೀವೇ ಹೇಳಿದ್ದೀರ, ಆದ್ದರಿಂದ ನೀವೇ ಆ ಸಮಯ ಯಾವುದೋ ಹೇಳಬೇಕಾಗಿದೆ?**

**ಉತ್ತರ :–** ರತ್ನವನ್ನು ತೆಗೆದುಕೊಂಡು ಮಣ್ಣಿನಲ್ಲಿ ಬಚ್ಚಿಟ್ಟು ನಾನು ಬಡವನು ಆದಾಗ ರತ್ನವನ್ನು ತೆಗೆದು ಉಪಯೋಗಿಸಿಕೊಳ್ಳುತ್ತೇನೆಂದು ಹೇಳಿದಹಾಗೆ ದೇವರು ಭಗವಂತನ ರೂಪದಲ್ಲಿ ಬಂದು ತನ್ನ ಜ್ಞಾನವನ್ನು ಭಗವದ್ಗೀತೆ ಗ್ರಂಥವಾಗಿ ತಯಾರು ಮಾಡಿ ಅದನ್ನು ಒಂದು ವಿಧವಾಗಿ ಹುಟ್ಟಿದ ಭಾರತದೇಶದಲ್ಲಾಗಲೀ, ಪರಿಚಯವಾದ ಇಸ್ರಾಯೇಲ್ ದೇಶದಲ್ಲಾಗಲೀ ತಿಳಿಯುದಂತೆ ಮಾಡಿದ್ದಾನೆ. ವಾಸ್ತವವಾಗಿ ಭಗವದ್ಗೀತೆ ಜ್ಞಾನ ಭಾರತದೇಶದಲ್ಲಿಯೇ ಪ್ರಚಾರವಾಗಲಿಲ್ಲ. ಭಗವದ್ಗೀತೆಗಿಂತ ಹೆಚ್ಚಾಗಿ ವೇದಗಳು ಪ್ರಚಾರವಾಗಿವೆ. ಭಗವದ್ಗೀತೆ ಹೆಸರಿಗೆ ಹಿಂದೂಗಳ ಗ್ರಂಥವೆಂದು ಹೇಳಿದರೂ, ಹಿಂದೂಗಳಲ್ಲಿ ಭಗವದ್ಗೀತೆಯನ್ನು ನೋಡದವರು ಅರ್ಧಕ್ಕಿಂತ ಹೆಚ್ಚಾಗಿಯೇ ಇದ್ದಾರೆ. ಸುಮಾರು ಶೇ. 80 ರಷ್ಟು ಓದದವರಿದ್ದಾರೆ. ಶೇ. 20 ರಷ್ಟು ಜನ ಪೂರ್ತಿ ಓದಿದವರಿಲ್ಲ. ಸ್ವಲ್ಪ ಓದಿ ನಮಗೆ ಅರ್ಥವಾಗಲಿಲ್ಲವೆಂದು ಬಿಟ್ಟುಹಾಕಿದವರು ಶೇ. ಹದಿನೈದ (15) ರಷ್ಟು ಇದ್ದಾರೆ. ಉಳಿದ ಶೇ. ಐದರಷ್ಟು ಜನರಲ್ಲಿ ಸ್ವಲ್ಪಮಟ್ಟಿಗೆ ಅರ್ಥ ಮಾಡಿಕೊಂಡವರು ಶೇ.ಎರಡರಷ್ಟು ಮಂದಿ ಮಾತ್ರವೇ ಇದ್ದಾರೆ. ಪೂರ್ತಿಯಾಗಿ ಅಸಲಾದ ಭಾವನೆಯಲ್ಲಿ ಯಾರಿಗೂ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಅಂತಹ ಸ್ಥಿತಿಯಲ್ಲಿ ಭಗವದ್ಗೀತೆ ಇದೆ. ಅಷ್ಟೇ ಅಲ್ಲದೆ ಭಗವದ್ಗೀತೆಯನ್ನು ಓದಬಾರದೆಂದು ಹೇಳುವವರು ಸಹ ಇದ್ದಾರೆ. ಯಾರಾದರೇ ಅಷ್ಟೋ ಇಷ್ಟೋ ಜ್ಞಾನಿಗಳೆಂದು ನಾವು ನಂಬಿದ್ದೇವೋ ಅವರೇ ಭಗವದ್ಗೀತೆಯನ್ನು ಓದಬಾರ ದೆಂದು ಹೇಳುತ್ತಿದ್ದಾರೆ. ಇನ್ನೂ ಕೆಲವರು ಜ್ಞಾನಿಗಳ ಹಾಗೆ ಪ್ರವರ್ತಿಸುವವರು ಭಗವದ್ಗೀತೆಯನ್ನು ಮನೆಯಲ್ಲೇ ಇಟ್ಟುಕೊಳ್ಳಬಾರದು. ಮನೆಯಲ್ಲಿ ಭಗವದ್ಗೀತೆ ಇದ್ದರೆ ಮನೆಯಲ್ಲಿ ಕಷ್ಟಗಳು ಇರುತ್ತವೆಂದು ಭಯಪಡಿಸುವವರು ಸಹ ಇದ್ದಾರೆ. ಇನ್ನೂ ಸ್ವಲ್ಪ ಜನ ಸಂಸ್ಕೃತ ಬಾರದಿದ್ದರೆ ಭಗವದ್ಗೀತೆ ಓದಬಾರದೆಂದು ಹೇಳುವವರು ಇದ್ದಾರೆ. ಭಗವದ್ಗೀತೆ ಮೇಲೆ ಅಸೂಯೆಯನ್ನು ಬೆಳೆಸಿಕೊಂಡು ಹೊರಗೆ ತಿಳಿಯದಂತೆ ಮನುಷ್ಯರಿಗೆ ಅದನ್ನು ದೂರ ಮಾಡುವವರು ಭಾರತದೇಶದಲ್ಲಿ ಬಹಳ ಜನ ಇದ್ದಾರೆ. ಇಂತಹ ಸ್ಥಿತಿಯಲ್ಲಿ ಭಗವದ್ಗೀತೆ ಪ್ರಥಮ ದೈವಗ್ರಂಥವಾಗಿ ತಯಾರಾಗಿ ಐದು ಸಾವಿರ ವರ್ಷಗಳಾದರೂ ಭಗವದ್ಗೀತೆ ನಿಜ ಭಾವನೆ ಏನೋ ಯಾರಿಗೂ ತಿಳಿದಿಲ್ಲ.

ಈ ದಿನ ಭಗವದ್ಗೀತಾ ಗ್ರಂಥ ಅನೇಕ ಭಾಷೆಗಳಲ್ಲಿ ಬರೆಯಲಾಗಿದೆ. ಇತರ ದೇಶ ಭಾಷೆಗಳಲ್ಲಿ ಕೂಡಾ ಅನುವದಿಸಲಾಗಿದೆ. ಆ ವಿಧವಾಗಿ ಸುಮಾರು ಮೂನ್ನೂರ ಅರವತ್ತು ಮಂದಿ ಭಗವದ್ಗೀತೆಗೆ ವಿವರವನ್ನು ಬರೆದಿದ್ದಾರೆ. ಅವರಲ್ಲಿ ನಾನು ಒಬ್ಬನು, ನಾನು **"ತ್ರೈತ ಸಿದ್ಧಾಂತ"**ವನ್ನು ಆಧಾರ ಮಾಡಿಕೊಂಡು ಭಗವದ್ಗೀತೆಯನ್ನು ಬರೆಯುವುದು ನಡೆದಿದೆ. ಇಲ್ಲಿಯವರೆಗು ಎಷ್ಟು ಜನ ಬರೆದರೂ ಭಗವದ್ಗೀತೆಯನ್ನು ಒಂದು ಸಿದ್ಧಾಂತದ ಮೇಲೆ ಹೇಳಲಿಲ್ಲ. ಯಾರ ಇಷ್ಟಬಂದ ಭಾವನೆಯನ್ನು, ಯಾರಿಗೆ ತೋಚಿದ ಭಾವನೆಯನ್ನು ಅವರು ಬರೆಯುವುದು ನಡೆದಿದೆ. ಅಂತಹ ಸ್ಥಿತಿಯಲ್ಲಿ ಭಗವದ್ಗೀತೆ ಯಾವುದಕ್ಕೆ ಮಾರ್ಗದರ್ಶಕ ಆಗಬೇಕೋ ಅದಕ್ಕೆ ಮಾರ್ಗದರ್ಶಕತೆಯನ್ನು ತೋರಿಸಲಾರದೆ ಹೋಗಿದೆ. ಈದಿನ ಜ್ಞಾನಿಗಳಾಗಿ ಸಂಸ್ಕೃತ ಪಂಡಿತರಾಗಿರುವ ಸ್ವಾಮೀಜಿಗಳು, ಸನ್ಯಾಸಿಗಳು ಎಷ್ಟೋ ಜನ ತಮ್ಮ ಪಾಂಡಿತ್ಯವನ್ನು ಉಪಯೋಗಿಸಿ ಪ್ರಜಾರಂಜಕವಾಗಿ ಭಗವದ್ಗೀತೆಯನ್ನು ಬರೆದು ಪ್ರಜೆಗಳ ಮೆಚ್ಚುಗೆಯನ್ನು ಹೊಂದಿದ್ದಾರೆ ಹೊರತು ದೇವರ ಮೆಚ್ಚುಗೆಯನ್ನು ಹೊಂದಲಾರದೆ ಹೋಗಿದ್ದಾರೆ. ಪ್ರಜೆಗಳ ಹತ್ತಿರ ಅವರ ಪಾಂಡಿತ್ಯವನ್ನು, ಅವರ ಬುದ್ಧಿ ಪ್ರತಿಭೆಯನ್ನು ಸಾರಿಕೊಳ್ಳುವಂತೆ ಭಗವದ್ಗೀತೆಯನ್ನು ಬರೆದಿದ್ದಾರೇ ಹೊರತು ಈ ಶ್ಲೋಕಕ್ಕೆ ನಾವು ಹೇಳುವ ಭಾವನೆ ಸರಿಯಾಗಿರುವುದೇನಾ? ಎಂದು ಒಬ್ಬರು ಸಹ ಆಲೋಚಿಸಲಾರದೆ ಹೋಗಿದ್ದಾರೆ. ಸರ್ವಮಾನವರಿಗೂ ಸಮಾನವಾಗಿರುವ ದೇವರು ಕುಲಗಳಾಗಿ, ವರ್ಗಗಳಾಗಿ ಸೃಷ್ಠಿಸಿ ಕೆಲವರನ್ನು ಹತ್ತಿರವಾಗಿ ಕೆಲವರನ್ನು ದೂರವಾಗಿ ಇಡುತ್ತಾನಾ! ಎಂದು ಆಲೋಚಿಸಲಾರದೆ ಹೋಗಿದ್ದಾರೆ.

ದೇವರು ರೂಪ ಇಲ್ಲದವನೆಂದು ಹೇಳಿದರೂ ದೇವರ ರೂಪವನ್ನು ವರ್ಣಿಸಿ ಹೇಳುವುದು ತಪ್ಪಲ್ಲವೇ! ಎಂದು ಯೋಚಿಸಲಾರದೆ ಹೋಗಿದ್ದಾರೆ. ಈ ಕೆಲಸಗಳಿಂದ ನಾನು ತಿಳಿಯಲ್ಪಡುವುದಿಲ್ಲವೆಂದು ಹೇಳಿದರೂ ಆ ಕೆಲಸಗಳನ್ನೇ ಮಾಡಬೇಕೆಂದು ಬರೆಯುವುದು ದೇವರಿಗೆ ವಿರುದ್ಧ ಭಾವನೆ ಅಲ್ಲವಾ! ಎಂದು ಆಲೋಚಿಸಲಾರದೆ ಹೋಗಿದ್ದಾರೆ. ಭಗವದ್ಗೀತೆಯಲ್ಲಿ

ವಿಗ್ರಹಾರಾಧನೆಯಿಂದ ದಾರಿತಪ್ಪಿದವರಾಗುತ್ತೀರೆಂದು ಹೇಳಿದರೂ, ವಿಗ್ರಹಾರಾಧನೆಯೇ ಮುಖ್ಯವೆಂದು ಹೇಳುವುದು ದೇವರನ್ನು ಹೀಯಾಳಿಸಿ ದಂತಲ್ಲವೆ! ಎಂದು ತಿಳಿಯಲಾರದೆ ಹೋಗಿದ್ದಾರೆ. ನನ್ನನ್ನೇ ಪೂಜಿಸು, ನನ್ನನ್ನೇ ನಮಸ್ಕರಿಸು ಎಂದು ದೇವರು ಹೇಳಿದಾಗ, ತನ್ನನ್ನು ಪೂಜಿಸೆಂದು ಹೇಳಿಕೊಳ್ಳುವ ವರು ದೇವರಿಗೆ ವಿರುದ್ಧವಾಗಿ ನಡೆಯುವವರಲ್ಲವಾ! ಎಂದು ಸ್ವಲ್ಪವಾದರೂ ಲೆಕ್ಕಿಸಲಾರದೆ ಹೋಗಿದ್ದಾರೆ. ಯಾವ ಕಾಲದಲ್ಲಿ ಮರಣಿಸಿದರೆ ಮೋಕ್ಷಕ್ಕೆ ಹೋಗುತ್ತೀಯೋ, ಯಾವ ಕಾಲದಲ್ಲಿ ಮರಣಿಸಿದರೆ ಮೋಕ್ಷಕ್ಕೆ ಹೋಗುವು ದಿಲ್ಲವೋ ಹೇಳುವೆನೆಂದು ಆ ಕಾಲವನ್ನು ಕುರಿತು ದೇವರು ಹೇಳಿರುವಾಗ, ಅದರ ಭಾವನೆಯನ್ನು ಪೂರ್ತಿ ಬದಲಾಯಿಸಿ ಬರೆದವರು ನರಕಕ್ಕೆ ಹೊರತುಪಡಿಸಿ, ಅವರ ದಾರಿ ಬೇರೆ ಇಲ್ಲವೆಂದು ಗ್ರಹಿಸಲಾರದೆ ಹೋಗಿದ್ದಾರೆ. ಈ ವಿಧವಾಗಿ ಹೇಳಿದರೇ ಈದಿನ ಭಗವದ್ಗೀತೆ ಬಹಳ ಜನ ಪ್ರಚಾರ ಮಾಡುತ್ತಿದ್ದಾರೆಂದು ಹೇಳಿದರೂ, ಭಗವದ್ಗೀತೆ ಬಹಳ ಜನರಿಗೆ ತಿಳಿದಿದೆಯೆಂದು ಕೆಲವರು ಹೇಳಿದರೂ, ಅದು ಎಲ್ಲವೂ ಕನಸೆಂದು ಇಲ್ಲಿಯವರೆಗು ಭಗವದ್ಗೀತೆ ಮನುಷ್ಯರಿಗೆ ಹತ್ತಿರವಾದಂತೆ ಕಾಣಿಸಿದರೂ, ಅದು ದೂರವಾಗುತ್ತಾ ಬಂದಿದೆಯೆಂದು ಅರ್ಥವಾಗಿದೆ. ನಮ್ಮ ಮಾತು ಕೆಲವರಿಗೆ ಅಸತ್ಯವಾಗಿ, ನಂಬಲಿಕ್ಕಾಗದ ವಿಧವಾಗಿ ಕಾಣಿಸಿದರೂ ಕೊನೆಗೆ ನಾನು ಹೇಳಿರುವುದೇ ಸತ್ಯವಾಗುತ್ತದೆ. ಇದು ಗರ್ವದಿಂದ ಅಹಂನಿಂದ ಹೇಳುವ ಮಾತಲ್ಲ. ದೇವರ ಅಜ್ಞೆಯೇ ಹಾಗೆ ಇದೆ. ದೇವರು ಸ್ವಲ್ಪ ಗಡುವನ್ನು ನಿರ್ಣಯಿಸಿ, ಆ ಗಡುವಿನವರೆಗು ಭಗವದ್ಗೀತೆ ಮಣ್ಣಿನಲ್ಲಿ ಮಾಣಿಕ್ಯದಂತೆ, ಮಸಿಬಟ್ಟೆಯಲ್ಲಿ ವಜ್ರದಹಾಗೆ ಕಾಣಿಸದೆ ಇರುವಂತೆ ನಿರ್ಣಯಿಸಿದ್ದಾನೆ. ಆ ನಿರ್ಣಯದ ಪ್ರಕಾರ ಇಲ್ಲಿಯವರೆಗು ಭಗವದ್ಗೀತೆ ಹೊರಗೆ ಸ್ಪಷ್ಟವಾಗಿ ಕಾಣಿಸದೆ ಮರೆಯಲ್ಲಿ ಬಿದ್ದು ಹೋಗಿದೆ. ಈಗೀಗ ಆ ಗಡುವು ಮುಗಿದುಹೋಗಿದೆ. ಪೋತುಲೂರಿ ವೀರಬ್ರಹ್ಮಯ್ಯರವರು ತನ್ನ ಕಾಲಜ್ಞಾನದಲ್ಲಿ **"ನಂದನ ನಾಮ ಸಂವತ್ಸರದಿಂದ ಜ್ಞಾನ ಪ್ರಕಾಶಿಸುವುದು"** ಎಂದು ಭವಿಷ್ಯತ್ತನ್ನು ಕುರಿತು ಬರೆದಿಟ್ಟಿದ್ದಾನೆ. ನಂದನ ನಾಮ ಸಂವತ್ಸರ ಕಳೆದುಹೋಗಿದೆ. ಈಗೀಗಲೇ ಭಗವದ್ಗೀತೆ ನಿಜ ಭಾವನೆ

ಹೊರಗೆ ಬರಲು ಪ್ರಾರಂಭವಾಗಿದೆ. ಶೀಘ್ರದಲ್ಲೇ ಭಗವದ್ಗೀತೆ ಪ್ರಪಂಚಕ್ಕೇ ಪರಿಚಯವಾಗಬಲ್ಲದು.

**ಪ್ರಶ್ನೆ :– ನೀವು ಇಲ್ಲಿಯವರೆಗು ಕ್ರೈಸ್ಥವವು ಹೇಗೆ ಹಿಂದೂತ್ವದೊಂದಿಗೆ ಅನುಸಂಧಾನವಾಗಿ ಹುಟ್ಟಿದೆಯೋ ಬರೆದಿದ್ದೀರ. ಹಿಂದೂ ಜ್ಞಾನವನ್ನು ಬೋಧಿಸಿದ ಭಗವಂತನು ಕ್ರೈಸ್ಥವ ಮತದಲ್ಲಿಯೂ ತಾನೇ ಇದ್ದೇನೆನ್ನುವಂತೆ ಮೊದಲೇ ಪ್ರಣಾಳಿಕೆಯನ್ನು ಜಾರಿಮಾಡಿಕೊಂಡಿದ್ದಾನೆ. ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿನ ಜ್ಞಾನವೇ ಯೇಸು ಬೋಧಿಸಿದ್ದಾನೆಂದು ಸಹ ಅರ್ಥವಾಗುತ್ತಿದೆ. ಅಷ್ಟೇ ಅಲ್ಲದೆ ಎರಡು ಗ್ರಂಥಗಳಲ್ಲಿಯೂ ಮೊದಲ ಗ್ರಂಥವಾದ ತೌರಾತ್‌ನಲ್ಲಿನ ವಿಷಯಗಳೇ ಇವೆಯೆಂದು ಅಂತಿಮ ದೈವಗ್ರಂಥ ಹೇಳುವುದರಿಂದ ಮೂರು ಗ್ರಂಥಗಳು ಒಂದರೊಂದಿಗೆ ಮತ್ತೊಂದು ಅವಿನಾಭಾವ ಸಂಬಂಧ ಹೊಂದಿವೆ. ಮೂರು ಗ್ರಂಥಗಳು ಒಂದರೊಂದಿಗೆ ಮತ್ತೊಂದು ಅನುಸಂಧಾನವಾಗಿದ್ದರೂ ಮೂರು ಗ್ರಂಥಗಳ ಜ್ಞಾನವನ್ನು ಅನುಸರಿಸುವ ಪ್ರಜೆಗಳು ಬೇರೆಬೇರೆ ಅಭಿಪ್ರಾಯಗಳು ಹೊಂದಿ ನಮ್ಮ ದೇವರು ಅಲ್ಲಾಹ್, ನಿಮ್ಮ ದೇವರು ಯೆಹೋವಾ, ಇನ್ನೊಬ್ಬರ ದೇವರು ಯಾರೋ ಎನ್ನುವಂತೆ ಹೇಳುತ್ತಾ, ನಮ್ಮ ಜ್ಞಾನ ಬೇರೆ, ನಿಮ್ಮ ಜ್ಞಾನ ಬೇರೆ, ನಮ್ಮ ಆರಾಧನೆಗಳು ಬೇರೆ ನಿಮ್ಮ ಆರಾಧನೆಗಳು ಬೇರೆ ಎಂದು ಹೇಳಿಕೊಳ್ಳುವುದು, ಒಬ್ಬರ ಮೇಲೆ ಮತ್ತೊಬ್ಬರು ಅಸೂಯೆ ಹೊಂದಿರುವುದು ಈದಿನ ನಡೆಯುತ್ತಿದೆ. ಅಂತಿಮ ದೈವ ಗ್ರಂಥದಲ್ಲಿ ಮೂರು ದೈವ ಗ್ರಂಥಗಳ ಜ್ಞಾನ ಒಂದೇ, ಮೂರು ಗ್ರಂಥಗಳನ್ನು ಓದಿ, ಅವುಗಳನ್ನು ಅನುಸರಿಸದೇ ಹೋದರೆ ನೀನು ಯಾವ ಧರ್ಮದಲ್ಲಿ (ಯಾವಮತದಲ್ಲಿ) ಇಲ್ಲದಂತೇ ಎಂದು ಹೇಳಿದ್ದರೇ, ಆ ವಾಕ್ಯವನ್ನು ಪಕ್ಕಕ್ಕಿಟ್ಟು ಮೂರು ಗ್ರಂಥಗಳನ್ನು ಓದಬೇಕೆಂದು, ಮೂರು ಗ್ರಂಥಗಳನ್ನು ಒಂದೇ ಗೌರವದಿಂದ ನೋಡಬೇಕೆಂದು ಮನುಷ್ಯರು ಸ್ವಲ್ಪವಾದರೂ ಅಂದುಕೊಳ್ಳುತ್ತಿಲ್ಲ.**

ದೈವ ಗ್ರಂಥಗಳಿದ್ದರೂ ಅದರಲ್ಲಿನ ಜ್ಞಾನದ ಮೇಲೆ ಶ್ರದ್ಧೆ ತೋರಿಸದೆ ಬಾಹ್ಯಾಚರಣೆ ಆದ ಮತವನ್ನು, ಅದರ ಕಟ್ಟುಪಾಡುಗಳನ್ನು ತಯಾರು

**ಮಾಡಿಕೊಂಡು ಅವರವರ ಮತ ಕಟ್ಟುಪಾಡುಗಳ ಪ್ರಕಾರ ವೇಷದಲ್ಲಿಯೂ, ಆಚರಣೆಯಲ್ಲಿಯೂ ಎಷ್ಟೋ ವ್ಯತ್ಯಾಸಗಳು ಹೊಂದಿದ್ದಾರೆ. ವ್ಯತ್ಯಾಸಗಳು ಹೊಂದಿರುವುದಲ್ಲದೆ ನಮ್ಮ ಜ್ಞಾನ ಬೇರೆ, ಇತರರ ಜ್ಞಾನ ಬೇರೆಯೆಂದು ಒಬ್ಬರನ್ನೊಬ್ಬರು ಅಸೂಯೆ ಹೊಂದಿದ್ದಾರೆ. ದೈವ ಗ್ರಂಥಗಳಲ್ಲಿ ಹೇಳದ ಮತದ ಮೇಲೆ ಹೆಚ್ಚಿನ ಚಿಂತೆ ಹೊಂದಿ, ಅದನ್ನು ಅಭಿವೃದ್ಧಿ ಮಾಡಬೇಕೆಂಬ ಪ್ರಯತ್ನ ಮಾಡುತ್ತಿದ್ದಾರೆ. ದೈವ ಗ್ರಂಥಗಳಾದ ಖುರಾನ್‌ನನ್ನು ಮುಸ್ಲಿಮ್‌ರು ದೊಡ್ಡದಾಗಿ ಗೌರವಿಸುತ್ತಿದ್ದಾರೆ. ಹಾಗೇ ಉಳಿದ ಮತದವರು ಅವರ ಗ್ರಂಥಗಳನ್ನು ದೊಡ್ಡದಾಗಿ ಹೇಳಿ ಕೊಳ್ಳುತ್ತಿದ್ದಾರೆ. ಆದರೇ ಗ್ರಂಥದಲ್ಲಿನ ಸಮಾಚಾರದಲ್ಲಿ ಮತ ಇಲ್ಲದಿದ್ದರೂ ಮನುಷ್ಯ ಮತವನ್ನು ಏಕೆ ಸೃಷ್ಠಿಸಿಕೊಂಡಿದ್ದಾನೆ? ಮೂರು ಗ್ರಂಥಗಳ ಜ್ಞಾನ ತಿಳಿದು ಮೂರು ಗ್ರಂಥಗಳ ಪ್ರಕಾರ ಅನುಸರಿಸಿದಾಗ ನೀನು ಧರ್ಮದಲ್ಲಿ ಇದ್ದಂತೆ ಎಂದು ದೈವ ಗ್ರಂಥವಾದ ಖುರಾನ್‌ನಲ್ಲಿ ಹೇಳಿರುವಾಗ ಮನುಷ್ಯರು ಆ ಮಾತಿಗೆ ಬೆಲೆಕೊಡುತ್ತಿದ್ದಾರಾ? ಆ ಮಾತನ್ನು ಲೆಕ್ಕ ಮಾಡದಿರುವಾಗ ದೇವರ ಮಾತನ್ನು ಅತಿಕ್ರಮಿಸಿದಂತೇ ಅಲ್ಲವೆ! ದೇವರ ವಾಕ್ಕನ್ನು ಅಗೌರವಪಡಿಸಿದಂತಲ್ಲವೆ! ದೈವ ಗ್ರಂಥಕ್ಕೆ ವಿರುದ್ಧವಾಗಿ ಪ್ರವರ್ತಿಸಿದಂತಲ್ಲವೆ! ಇಂತಹ ಅಜ್ಞಾನ, ಅಧರ್ಮಗಳಿಂದ ಕೂಡಿಕೊಂಡ ಮನುಷ್ಯರು ಯಾವಾಗ ಸಂಸ್ಕರಿಸಲ್ಪಡುತ್ತಾರೆ? ಯಾವಾಗ ದೈವ ಗ್ರಂಥಗಳ ಪ್ರಕಾರ ನಡೆಯುತ್ತಾರೆ?**

**ಉತ್ತರ :–** ರೋಗ ಹೆಚ್ಚಾಗಿ ಔಷಧಗಳಿಂದ ವಾಸಿಯಾಗದಿರುವಾಗ ಶಸ್ತ್ರ ಚಿಕಿತ್ಸೆ ಅವಶ್ಯಕವೆನ್ನುವಂತೆ, ಸಮಾಜದಲ್ಲಿನ ಮನುಷ್ಯರು ಪೂರ್ತಿ ಅಜ್ಞಾನದಲ್ಲಿ ಮುಳುಗಿ ಹೋದಾಗ ಅವನನ್ನು ದೈವಗ್ರಂಥಗಳು ಸಹ ವಾಸಿಮಾಡಲಾರವು. ತಾನು ದೈವಗ್ರಂಥಗಳ ಪ್ರಕಾರವೇ ನಡೆಯುತ್ತಿದ್ದೇನೆಂದುಕೊಂಡು, ಅವುಗಳಿಗೆ ವಿರುದ್ಧವಾಗಿ ನಡೆಯುವವರಿರುವಾಗ ಅವರ ತಪ್ಪು ಅವರಿಗೆ ಕಾಣಿಸುವುದಿಲ್ಲ. ಆದ್ದರಿಂದ ಮನುಷ್ಯ ದೈವ ಗ್ರಂಥಗಳ ಜ್ಞಾನದಿಂದ ಕೂಡಾ ವಾಸಿಯಾಗದಿದ್ದಾಗ ದೇವರು ಪುನಃ ಅವತರಿಸಿ ತನ್ನ ಧರ್ಮಗಳನ್ನು ಮನುಷ್ಯರ ಮಧ್ಯದಲ್ಲಿ ನೆಲೆಗೊಳಸಿ ಹೋಗುವನು. ಈ ವಿಷಯವನ್ನು ಮೂರು ಗ್ರಂಥಗಳಲ್ಲಿ ಹೇಳಿದ್ದಾನೆ.

ಆದರೂ ಕೆಲವರು ಮನುಷ್ಯರು ನಮ್ಮ ಮತದಲ್ಲಿನ ದೇವರು ಹುಟ್ಟುವುದಿಲ್ಲ, ದೇವರು ಹುಟ್ಟುವವನೇ ಅಲ್ಲ ಎಂದು ಮೊಂಡರಂತೆ ವಾದಿಸುತ್ತಿದ್ದಾರೆ. ಹಾಗೆ ವಾದಿಸುವವರ ಗ್ರಂಥಗಳಲ್ಲಿ ದೇವರು ಅವತರಿಸುತ್ತಾನೆಂದು ಇದ್ದರೂ, ಅದನ್ನು ಅರ್ಥ ಮಾಡಿಕೊಳ್ಳಲಾರದವರು, ನಮ್ಮ ಗ್ರಂಥದಲ್ಲಿ ದೇವರು ಮನುಷ್ಯನಾಗಿ ಹುಟ್ಟುತ್ತೇನೆಂದು ಹೇಳಲಿಲ್ಲ ಎನ್ನುತ್ತಿದ್ದಾರೆ. ದೇವರು ಹುಟ್ಟುವುದಿಲ್ಲ ಎನ್ನುವ ವಾದ ಮುಖ್ಯವಾಗಿ ಮುಸ್ಲಿಮ್‌ರಲ್ಲಿ ಹೆಚ್ಚಾಗಿ ಇದೆ. ಮುಸ್ಲಿಮ್‌ರ ಮತ ಗ್ರಂಥವಾಗಿ ಹೇಳಲ್ಪಡುತ್ತಿರುವ ಅಂತಿಮ ದೈವ ಗ್ರಂಥದಲ್ಲಿ ಅನೇಕ ಕಡೆ ದೇವರು ಅವತರಿಸುತ್ತಾನೆಂದು ಹೇಳುವುದೇ ಅಲ್ಲದೆ, ಹೇಗೆ ಅವತರಿಸುತ್ತೇನೆನ್ನುವ ವಿಷಯವನ್ನು ಕೂಡಾ ಹೇಳಿದ್ದಾನೆ.

ದೇವರು ಭೂಮಿಮೇಲೆಗೆ ಬಂದರೆ ಯಾರಿಗೂ ತಿಳಿಯದಂತೆ ರಹಸ್ಯ ಜೀವನವನ್ನು ಮಾಡಿ ಕೊನೆಗೆ ತಾನು ಹೇಳಬೇಕಾಗಿರುವುದು ಮನುಷ್ಯರಿಗೆ ಹೇಳಿ ಹೋಗುವನು. ಆದರೇ ದೇವರು ಯಾವಾಗ ಭೂಮಿ ಮೇಲೆಗೆ ಮನುಷ್ಯನಾಗಿ ಬರುತ್ತಾನೆಂದು ಯಾರಿಗೂ ತಿಳಿದಿಲ್ಲ. ಬಂದ ನಂತರ ಕೂಡಾ ಯಾರೂ ಭಗವಂತನ ಜನ್ಮವನ್ನು ಗುರುತಿಸಲಾರರು. ಒಂದುವೇಳೆ ನಾನೇ ಭಗವಂತನು, ನಾನೇ ಅವತರಿಸಿದ್ದೇನೆಂದು ಹೇಳಿದರೂ ಯಾರೂ ಕೇಳುವ ಸ್ಥಿತಿಯಲ್ಲಿ ಇರುವುದಿಲ್ಲ. ಆದ್ದರಿಂದ ದೇವರು ಮನುಷ್ಯನಾಗಿ ಬಂದರೂ ತನ್ನ ವಿಷಯವನ್ನು ಯಾರಿಗೂ ತಿಳಿಯದಂತೆ ತನ್ನ ಕೆಲಸವನ್ನು ತಾನು ಮಾಡುತ್ತಾ ಹೋಗುವನು. ಆಗ ಆತನು ಮಾಡಬೇಕಾದ ಕಾರ್ಯಗಳಲ್ಲಿ ಇಲ್ಲದೆ ಹೋದ ಧರ್ಮಗಳನ್ನು ಪುನಃ ನೆಲೆಗೊಳಿಸುವನು. ಅಧರ್ಮಗಳು ಇವು ಎಂದು ಹೇಳಿ ಅವುಗಳ ಹತ್ತಿರಕ್ಕೆ ಯಾರನ್ನೂ ಹೋಗದಂತೆ ಮಾಡುವುದರಿಂದ ಅಧರ್ಮಗಳು ಕಡಿಮೆಯಾಗಿ ಧರ್ಮಗಳು ಹೆಚ್ಚಾಗುತ್ತವೆ. ದೇವರು ಮನುಷ್ಯನ ಶರೀರವನ್ನು ಧರಿಸಿ ಭಗವಂತನಾಗಿ ಬಂದಾಗ ಆತನು ಸಾಧಾರಣ ಮನುಷ್ಯನಹಾಗೆ ಇದ್ದರೂ ಆತನು ಎಲ್ಲರಂತೆ ಮನುಷ್ಯನಲ್ಲ. ಆತನು ಪ್ರತ್ಯೇಕವಾದ ಮನುಷ್ಯನಾಗಿ ಇರುತ್ತಾನೆ. ಆದ್ದರಿಂದ ಆತನನ್ನು ಮನುಷ್ಯ ಎನ್ನದಂತೆ ಪ್ರತ್ಯೇಕವಾದ ಹೆಸರಿನಿಂದ

**"ಭಗವಂತನು"** ಎಂದು ಕರೆಯುತ್ತಿದ್ದೇವೆ. ಭಗವಂತನು ಭೂಮಿಮೇಲೆಗೆ ಬಂದರೆ ಈತನು ಮುಸ್ಲಿಮ್ ಭಗವಂತನೆಂದೋ, ಕ್ರೈಸ್ಥ ಭಗವಂತನೆಂದೋ, ಹಿಂದೂ ಭಗವಂತನೆಂದೋ ಅನ್ನುವುದಕ್ಕೆ ಅವಕಾಶವಿರುವುದಿಲ್ಲ. ಆತನು ಒಂದು ಮತಕ್ಕೆ ಸಂಬಂಧಿಸಿದವನಾಗಿ ಇರುವುದಿಲ್ಲ. ಆದ್ದರಿಂದ ಆತನು ಎಲ್ಲ ಮತಗಳ ಲೋಪಗಳನ್ನು ಹೊರಗೆ ತೆಗೆದು ಅವುಗಳನ್ನು ಸರಿಪಡಿಸುವನು. ಅಂತಹ ಕೆಲಸಗಳಲ್ಲಿ ಮತ ಛಾಂದಸ ವಾದಿಗಳಾಗಿ ಇರುವವರು ಬಂದಿರುವ ಭಗವಂತನೊಂದಿಗೆ ವಾದಿಸಿ ಎದುರಿಸುತ್ತಾರೆ. ಆದರೂ ಆತನು ಭಗವಂತ ನಾಗಿರುವುದರಿಂದ ಯಾವ ಮತದವನಿಗೆ ಆ ಮತ ಗ್ರಂಥದಲ್ಲಿಯೇ ಸಮಾಧಾನವನ್ನು ತೋರಿಸಿ ನಿನ್ನ ದೇವರು ಹೀಗೆ ಹೇಳಿರುವಾಗ ನೀನು ವಿರುದ್ಧವಾಗಿ ಪ್ರವರ್ತಿಸುತ್ತಿದ್ದೀಯೆಂದು ಕೇಳಬಲ್ಲನು. ಅವನ ಮತದಿಂದಲೇ ಅವನ ಬಾಯನ್ನು ಮುಚ್ಚಿಸಬಲ್ಲನು.

ಅಜ್ಞಾನವಿರುವ ಮನುಷ್ಯರ ಮಧ್ಯದಲ್ಲಿ ಭಗವಂತನಿಗೂ ಸಹ ಕೆಲವು ತೊಂದರೆಗಳು, ಕೆಲವು ಅವಮಾನಗಳು ತಪ್ಪುವುದಿಲ್ಲ. ಆದರೂ ಆತನ ತಾಳ್ಮೆಯಿಂದ ಅವುಗಳನ್ನು ಸುದಾರಿಸಿಕೊಂಡು ಮುಂದಕ್ಕೆ ಹೋಗುತ್ತಿರುವನು. ಭಗವಂತನಿಗೆ ಧರ್ಮಸ್ಥಾಪನೆಯಲ್ಲಿ ಎಂತಹ ಅನಾನುಕೂಲ ಪರಿಸ್ಥಿತಿಗಳು ಏರ್ಪಟ್ಟರೂ, ಅವುಗಳ ಬಾಧೆಗಳಿಗೆ ಸಹಿಸಿಕೊಂಡು ಜ್ಞಾನ ಮಾರ್ಗವನ್ನು ವಿಸ್ತರಿಸುತ್ತಾ ಹೋಗುತ್ತಿರುವನು. ಹಾಗೆ ಒಂದು ಬಾರಿ ಪೂರ್ತಿ ಧರ್ಮಸಂಸ್ಥಾಪನೆ ಮಾಡುವುದಕ್ಕೆ ಆತನು ಮೂರು ಬಾರಿ, ಮೂರು ಅವತಾರಗಾಳಗಿ ಭೂಮಿಮೇಲೆ ಹುಟ್ಟಬೇಕಾಗಿರುತ್ತದೆ. ಈದಿನ ಅಧರ್ಮಗಳು ಹೆಚ್ಚಾಗಿ ಧರ್ಮಗಳು ತಳಸೇರಿ ಹೋಗಿವೆ. ಮತ ಎನ್ನುವ ಅಧರ್ಮ ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಎಲ್ಲರನ್ನೂ ತನ್ನವರನ್ನಾಗಿ ಮಾಡಿಕೊಂಡು ಆಡಿಸುತ್ತಿದೆ. ಉಳಿದ ಯುಗಗಳಲ್ಲಿನ ಅಧರ್ಮಗಳಿಗಿಂತ ಈದಿನ ಹೆಚ್ಚಿನ ಪ್ರಭಾವ ಹೊಂದಿದ ಮತ ಎನ್ನುವ ಅಧರ್ಮ ಪ್ರಪಂಚವೆಲ್ಲಾ ವ್ಯಾಪಿಸಿ ಎಂಟು ವರ್ಷಗಳ ಮಗುವಿನಲ್ಲಿ ಸಹ ಸೇರಿಹೋಗಿ ತನಗೆ ಯಾವ ಶತ್ರುವಾಗದವನಮೇಲೆ ಸಹ ಬುಸುಗುಟ್ಟುತ್ತಿದೆ. ಈದಿನ

ಮತವೆನ್ನುವ ಅಧರ್ಮ ಸಾವಿರ ಕೈಗಳು ಹೊಂದಿ ಎಲ್ಲರನ್ನೂ ತನ್ನ ಕಡೆ ಸೆಳೆದುಕೊಳ್ಳುತ್ತಿದೆ. ದೇವರ ಮಾರ್ಗಕ್ಕೆ ಪೂರ್ತಿ ಮತ ಅಧರ್ಮವೇ ಆತಂಕ ವಾಗಿದೆ.

ಇಲ್ಲಿಗೆ ಭಗವದ್ಗೀತೆಯನ್ನು ಹೇಳಿದಾಗಿನಿಂದ ದೇವರು ಭಗವಂತನಾಗಿ ಎರಡು ಬಾರಿ ಭೂಮಿಮೇಲೆಗೆ ಬಂದು ಮೊದಲು ಒಬ್ಬನಿಗೇ, ಯಾರಿಗೂ ತಿಳಿಯದಂತೆ, ಕೆಲವು ನಿಮಿಷಗಳು ಮಾತ್ರವೇ ಧರ್ಮಗಳನ್ನು ತಿಳಿಸಿಹೋಗಿದ್ದಾನೆ. ಎರಡನೆ ಬಾರಿ ಬಂದಾಗ ಹನ್ನೊಂದು ಮಂದಿ ಶಿಷ್ಯರಿಗೆ ಮಾತ್ರವೇ ತನ್ನ ಬೋಧನೆಯನ್ನು ಮೂರು ವರ್ಷಗಳು ಮಾತ್ರವೇ ಹೇಳಿಹೋಗಿದ್ದಾನೆ. ಮೊದಲಬಾರಿ ಬಂದಾಗ ಸೃಷ್ಠಿ ಆದಿಯಲ್ಲಿ ಸೂರ್ಯನಿಗೆ ಹೇಳಿದ ಜ್ಞಾನವನ್ನೇ ಹೇಳಿ, ಅದನ್ನೇ ಭಗವದ್ಗೀತೆ ಗ್ರಂಥವಾಗಿ ಮಾಡಿ, ಮುಂಬರುವ ಕಾಲಕ್ಕೆಂದು ಎತ್ತಿಟ್ಟು ಹೋಗಿದ್ದಾನೆ. ಎರಡನೆಬಾರಿ ಭಗವಂತನು ಬಂದಾಗ ಹೇಳಿದ ಜ್ಞಾನವನ್ನು ಬೈಬಲ್ ಗ್ರಂಥವಾಗಿ ಮಾಡಿದ್ದಾನೆ. ಮೂರನೆಬಾರಿ ಬಂದು ಮೂರನೆ ಗ್ರಂಥವನ್ನು ಮಾಡಿದರೇ ಭಗವಂತನನ್ನು ಸುಲಭವಾಗಿ ಗುರುತುಹಿಡಿಯಬಹುದು. ಆದರೇ ಆತನು ಭಗವಂತನಾಗಿ ಬರುವುದಕ್ಕಿಂತ ಮುನ್ನವೇ ಮೂರನೆ ಗ್ರಂಥವನ್ನು ಭೂಮಿ ಮೇಲೆಗೆ ಕಳಿಸಿದ್ದಾನೆ. ಮೂರನೆ ಗ್ರಂಥವನ್ನು ತಂದಿರುವುದು, ಕೊಟ್ಟಿರುವುದು ಸಾಧಾರಣ ಮನುಷ್ಯ ಅಲ್ಲದಿರುವುದರಿಂದ, ಆತನು ಒಂದು ಗ್ರಹವಾದ್ದರಿಂದ ಆತನನ್ನು ಭಗವಂತನು ಎನ್ನುವುದಕ್ಕೆ ಅವಕಾಶವಿಲ್ಲ. ಹಾಗೆಂದು ಮೂರನೆ ಭಗವಂತನು ಬರುವುದಿಲ್ಲವಾ! ಎಂದು ಕೇಳಿದರೆ ತಪ್ಪದೆ ಬರುತ್ತಾನೆ. ಆತನು ಮೂರುಬಾರಿ ಅವತಾರಗಳಾಗಿ ಬಂದರೇ ಸಂಪೂರ್ಣವಾಗಿ ಒಂದು ಬಾರಿ ಭೂಮಿಮೇಲೆಗೆ ಬಂದಂತೆ ಧರ್ಮಸಂಸ್ಥಾಪನೆ ಮಾಡಿದಂತಾಗುತ್ತದೆ.

ಮೂರನೆಯಬಾರಿ ಬರುವ ಭಗವಂತನು ಪದ್ಧತಿ ಪ್ರಕಾರ ಮನುಷ್ಯನ ಹಾಗೆ ಇರುವ ಭಗವಂತನಾಗಿ ಬರಬೇಕಾಗಿದೆ. ಆದರೇ ಇದಕ್ಕು ಮೊದಲು ಎರಡು ಬಾರಿ ಭಗವಂತನು ಬಂದಾಗ ಮತ ಪ್ರಸ್ತಾಪವೇ ಭೂಮಿಮೇಲೆ ಇಲ್ಲ. ಈದಿನ ಮತ ಅನಕೊಂಡ ಹಾವಿನಂತೆ ಪೂರ್ತಿ ಬಲವಾಗಿ ಇದೆ.

ಆತನು ಯಾವ ಪ್ರಣಾಳಿಕೆಯಿಂದ ತನ್ನ ಜ್ಞಾನವನ್ನು ಹೇಳಿ ಮತವೆನ್ನುವ ಅಧರ್ಮವನ್ನು ಇಲ್ಲದಂತೆ ಮಾಡುತ್ತಾನೋ ನೋಡಬೇಕಾಗಿದೆ. ದೇವರು ಅಂದುಕೊಂಡರೇ ಏನಾದರೂ ಮಾಡಬಲ್ಲನು. ಆದ್ದರಿಂದ ಈ ಬಾರಿ ಆತನು ಹೇಳುವ ಬೋಧನೆ ಭಗವದ್ಗೀತೆಯ ಹಾಗೆ ಕೆಲವು ನಿಮಿಷಗಳು, ಬೈಬಲ್‌ಹಾಗೆ ಮೂರು ವರ್ಷಗಳು ಅಲ್ಲದಂತೆ, ಈ ಬಾರಿ ಹೇಳುವ ಬೋಧನೆ 30 ಅಥವಾ 40 ವರ್ಷಗಳು ನಿರಂತರ ಬೋಧಿಸಬೇಕಾಗಿರುತ್ತದೆ. ಹಾಗಾದರೇನೆ ಮತಮೌಢ್ಯ ಮನುಷ್ಯರನ್ನು ಬಿಡುವುದಿಲ್ಲ. ಎಲ್ಲಿ ಯಾವ ಗ್ರಂಥದಲ್ಲೂ ಹೇಳದ ಮತವೆನ್ನುವುದು ಮನುಷ್ಯರೆನ್ನುವವರು ತಯಾರು ಮಾಡಿರುವುದೇ. ತಮ್ಮ ಆಧಿಪತ್ಯವನ್ನು ಬೆಳೆಸಿಕೊಳ್ಳುವುದಕ್ಕೆ ಪ್ರಜೆಗಳೆಲ್ಲರನ್ನೂ ತಮ್ಮ ಕೈಯ್ಯಲ್ಲಿ ಇಟ್ಟುಕೊಳ್ಳುವುದಕ್ಕೆ ಮಾಡಿದ ಕುತಂತ್ರವೇ ಮತ. ಮತ ಎನ್ನುವುದು ಮತ್ತಿನ ಪದಾರ್ಥವಂತಹದ್ದು. ಸ್ವಲ್ಪ ಏರಿದರೆ ಇನ್ನೂ ಸ್ವಲ್ಪ ಏರಿಸಿಕೊಳ್ಳಬೇಕೆನ್ನುವ ಚಿಂತೆ ಹೊರತು ಇದರಿಂದ ತಪ್ಪಿಸಿಕೊಳ್ಳೋಣ ಎನ್ನುವ ಚಿಂತೆ ಇರುವುದಿಲ್ಲ. ಆದ್ದರಿಂದ ಯಾರಾದರೂ ಎಷ್ಟು ಬುದ್ಧಿವಂತನಾದರೂ ಒಂದು ಬಾರಿ ಮತ ಎಂದು ಅದರಲ್ಲಿ ಸಿಲುಕಿಕೊಂಡರೇ ನಂತರ ಅದರಿಂದ ಹೊರಬೀಳಲಾರನು. ಆದ್ದರಿಂದ ಈ ಬಾರಿ ಭಗವಂತನು ಮತದ ಮೇಲೆ ಹೆಚ್ಚಿನ ದೃಷ್ಠಿಯನ್ನು ಹಾಯಿಸಿ ಮತವನ್ನು ನಿರೋಧಿಸದಂತೆ ಮತಗಳನ್ನು ಏಕ ಮಾಡುವ ಪ್ರಯತ್ನ ಮಾಡುತ್ತಾನೆ. ಹಾಗೆ ಮಾಡುವುದರಿಂದ ಮನುಷ್ಯ ಮತದಲ್ಲಿ ಇರುವಂತೇ ಭ್ರಮಿಸುತ್ತಾ ಮತದಿಂದ ಹೊರಬೀಳಬಲ್ಲನು.

ಮನುಷ್ಯ ಯಾವಾಗ ಮತದಿಂದ ಹೊರಬೀಳುತ್ತಾನೋ ಆಗ ಆತನಲ್ಲಿ ಮತದ್ವೇಷ ಇಲ್ಲದಂತಾಗಿ ಎಲ್ಲ ಮತಗಳು ಒಂದೇ ಎನ್ನುವ ಭಾವನೆಗೆ ಬರುತ್ತಾನೆ. ಆಗ ಮೂರು ದೈವಗ್ರಂಥಗಳ ಮೇಲೆ ಗೌರವಭಾವನೆ ಏರ್ಪಡುತ್ತದೆ. ಹಾಗೆ ಗೌರವ ಏರ್ಪಟ್ಟಾಗ ಮೂರು ಗ್ರಂಥಗಳನ್ನು ಅಸೂಯೆ ಇಲ್ಲದಂತೆ ಓದಬಲ್ಲನು. ಆಗ ಮೂರು ಗ್ರಂಥಗಳಲ್ಲಿನ ಜ್ಞಾನ ಒಂದೇಯೆಂದು ಗ್ರಹಿಸಬಲ್ಲನು. ಗೀತೆಯಲ್ಲಿನ ಶ್ಲೋಕಕ್ಕಾಗಲೀ, ಬೈಬಲ್ ವಾಕ್ಯಕ್ಕಾಗಲಿ, ಖುರಾನ್ ಆಯತ್‌ಗಳಿಗಾಗಲಿ ತಪ್ಪು

ಭಾವನೆ ಸೇರಿಸದಂತೆ ಸರಿಯಾದ ಭಾವನೆಯಿಂದ ಓದಬಲ್ಲನು. ಎಲ್ಲಾದರೂ ತಪ್ಪು ಭಾವನೆ ಇದ್ದರೂ ಅದು ಶಾಸ್ತ್ರ ವಿರುದ್ಧವಾಗಿ ಕಾಣಿಸುವುದರಿಂದ ಪ್ರತಿಯೊಬ್ಬರು ಸರಿಯಾದ ಅರ್ಥಕ್ಕೋಸ್ಕರ ಅನ್ವೇಷಿಸುತ್ತಾರೆ. ಈ ವಿಧವಾಗಿ ಭಗವಂತನು ಮೂರನೆಬಾರಿ ಬರುವುದರಿಂದ ಯಾರಿಗೂ ತಿಳಿಯದಂತೆಯೇ ಧರ್ಮಪ್ರತಿಷ್ಠಾಪನೆ ನಡೆದುಹೋಗುತ್ತದೆ. ಮೂರನೆ ದೈವಗ್ರಂಥ ಖುರಾನ್ ಮೊದಲೇ ಬಂದಿರುವುದರಿಂದ ಈ ಬಾರಿ ಭಗವಂತನು ಬಂದರೇ ದೈವ ಗ್ರಂಥ ಬರುವುದಿಲ್ಲ.

**ಪ್ರಶ್ನೆ :– ನೀವು ಮೂರು ಮತಗಳನ್ನು ಒಂದೇ ದಾರಿಯೊಳಗೆ ತರುತ್ತಿದ್ದೀರ. ಅದರಲ್ಲಿ ಒಂದು ಹಿಂದೂ ಮತದವರಿಗೆ ಮಾತ್ರ ಪುನರ್ಜನ್ಮಗಳ ಮೇಲೆ ನಂಬಿಕೆ ಇದೆ. ಉಳಿದ ಎರಡು ಮತಗಳಿಗೆ ಪುನರ್ಜನ್ಮಗಳ ಮೇಲೆ ನಂಬಿಕೆ ಇಲ್ಲ. ಪುನರ್ಜನ್ಮದಿಂದಲೇ ಪಾಪ ಅನುಭವಿಸಬೇಕಾಗಿ ಬರುತ್ತದೆಂದು ನೀವು ಹೇಳುತ್ತಿದ್ದೀರ. ಪುನರ್ಜನ್ಮ ಇಲ್ಲದಂತೆ ಪ್ರತ್ಯೇಕ ಸ್ವರ್ಗ, ನರಕಗಳಿಗೆ ಹೋಗಿ ಅಲ್ಲೇ ಸ್ಥಿರಸ್ಥಾಯಿಯಾಗಿ ಸ್ವರ್ಗದಲ್ಲೋ, ನರಕದಲ್ಲೋ ಇರುತ್ತೇವೆಂದು ಮುಸ್ಲಿಮ್‌ರು ಅನ್ನುತ್ತಿದ್ದಾರೆ. ನಿಮ್ಮ ಲೆಕ್ಕದಲ್ಲಿ ಸ್ವರ್ಗ, ನರಕಗಳು ಎಲ್ಲಾ ಇಲ್ಲೇ ಭೂಮಿಮೇಲೆಯೇ ಇವೆ. ಅವರ ಲೆಕ್ಕದಲ್ಲಿ ಪ್ರತ್ಯೇಕವಾದ ಲೋಕಗಳಲ್ಲಿ ಇವೆ ಎನ್ನುತ್ತಿದ್ದಾರೆ. ಅಂತಹವರಿಗೆ ನೀವು ಯಾವ ವಿಧವಾಗಿ ಹೇಳಬಲ್ಲಿರ? ನೀವು ಹೇಳಿದರೂ ಅವರು ಕೇಳುತ್ತಾರಾ? ಅವರ ಹಿರಿಯರು ಹೇಳಿದ ಮಾತುಗಳೇ ಪೂರ್ತಿ ಸತ್ಯಗಳೆಂದು ನಂಬುತ್ತಿರುವವರಿಗೆ ಅವರ ಹಿರಿಯರು ಹೇಳಿದ ಮಾತುಗಳು ಅಸತ್ಯವೆಂದು ಅವರಿಗೆ ತಿಳಿಯುವವರೆಗು ಅವರು ನಿಮ್ಮ ಮಾತುಗಳನ್ನು ಕೇಳುವುದಿಲ್ಲ. ಅಂತಹವರಿಗೆ ಹೇಳಬೇಕೆಂದರೇ ಕಷ್ಟವಾಗಿರುತ್ತದಲ್ಲವೆ! ನೂರು ಜನರಲ್ಲಿ ಒಬ್ಬನು ನಿನ್ನ ಮಾತು ಕೇಳಿದರೂ 99 ಮಂದಿ ನಿನ್ನ ಮಾತನ್ನು ಕೇಳದಂತೆ ನಮ್ಮ ಹಿರಿಯರು ಹೇಳಿರುವುದೇ ಸತ್ಯವೆಂದು ಹೇಳುತ್ತಾರೆ. ಬಹಳ ವಿಷಯಗಳಲ್ಲಿ ಅವರ ಹಿರಿಯರ ಮಾತಿನ ಮೇಲೆ ನಂಬಿಕೆಯಿಂದ ಅವರು ಹೇಳಿದಂತೆ ನಡೆಯುತ್ತಿದ್ದಾರೆ. ಇದಕ್ಕೆ ನೀವೇನೆನ್ನುತ್ತೀರಾ?**

**ಉತ್ತರ :–** ಪ್ರತಿ ಮನುಷ್ಯನನ್ನು ಸಕ್ರಮವಾದ ಮಾರ್ಗದಲ್ಲಿ ನಡೆಸುವುದಕ್ಕೆ

ದೇವರು ಮೊದಲೇ ತನ್ನ ಜ್ಞಾನವನ್ನು ತಿಳಿಸಿ ಅದನ್ನು ಭದ್ರವಾಗಿ ಗ್ರಂಥರೂಪಗಳಲ್ಲಿ ಕೊಟ್ಟಿದ್ದಾನೆ. ಹಾಗೆ ಕೊಟ್ಟಿರುವವೇ ಮೂರು ದೈವಗ್ರಂಥಗಳು. ಮೂರು ದೈವಗ್ರಂಥಗಳಲ್ಲಿಯೂ ಒಂದೇ ದೈವಜ್ಞಾನವಿದ್ದರೂ ಅವುಗಳನ್ನು ಮೂರು ಗ್ರಂಥಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಇದೇ ವಿಷಯವನ್ನೇ ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಸೂರಾ 6, ಆಯತ್ 91ರಲ್ಲಿ ಒಂದು ಕಡೆ **(6-91) "ತೌರಾತ್ ಗ್ರಂಥ ಒಂದು ಜ್ಯೋತಿ, ಮಾನವರಿಗೋಸ್ಕರ ಮಾರ್ಗದರ್ಶಕತ್ವ. ನೀವು ಅದನ್ನು ಬೇರೆಬೇರೆ ಗ್ರಂಥಗಳಾಗಿ ವಿಭಜಿಸಿ ತೋರಿಸುತ್ತಿದ್ದೀರ, ಎಷ್ಟೋ ವಿಷಯಗಳನ್ನು ಬಚ್ಚಿಡುತ್ತಿದ್ದೀರ"** ಎಂದು ಹೇಳುವುದು ನಡೆದಿದೆ. ಇದನ್ನನುಸರಿಸಿ ದೈವಜ್ಞಾನ ಒಂದೇ ಇದ್ದರೂ ನೀವು ಅದನ್ನು ಬೇರೆಬೇರೆಯಾಗಿ ಹೇಳಿಕೊಳ್ಳುತ್ತಿದ್ದೀರೆಂದು ಹೇಳಿದ್ದಾನೆ. ಹಾಗೆ ಹೇಳಿಕೊಳ್ಳುವುದೇ ಅಲ್ಲದೆ ಎಷ್ಟೋ ವಿಷಯಗಳನ್ನು ಬಚ್ಚಿಡುತ್ತಿದ್ದೀರೆಂದು ಸಹ ಹೇಳಿದ್ದಾನೆ. ಈ ಪಿತೂರಿ ಎಲ್ಲವನ್ನೂ ಗಮನಿಸಿ ನೋಡಿದರೆ, ಮತಕ್ಕೆ ಒಂದು ಗ್ರಂಥವಿದ್ದರೂ ಮನುಷ್ಯನಿಗೆ ಒಬ್ಬ ಗುರುವಿದ್ದಾನೆ. ಮತ ಕೊಟ್ಟಿರುವ ಗ್ರಂಥದಲ್ಲಿ ಮನುಷ್ಯನಿಗೆ ಬೇಕಾದ ಮಾರ್ಗವಿದ್ದರೂ ಮನುಷ್ಯ ಸ್ವತಃವಾಗಿ ಗ್ರಂಥ ಹೇಳಿದಂತೆ ನಡೆದುಕೊಳ್ಳದೇ, ಮನುಷ್ಯ ನಂಬಿದ ಗುರುವನ್ನು ಕೇಳಿ ಗ್ರಂಥದಲ್ಲಿ ಹೇಳಿದಂತೆ ನಡೆದುಕೊಳ್ಳ ಬಹುದಾ, ನಡೆಯಬಾರದಾ ಎಂದು ಕೇಳುತ್ತಿದ್ದಾನೆ. ತಮ್ಮ ಮತ ಹಿರಿಯರನ್ನೋ, ಗುರುವನ್ನೋ ವಿಶ್ವಾಸಿಸಿದಂತೆ ಗ್ರಂಥವನ್ನು ವಿಶ್ವಾಸಿಸುತ್ತಿಲ್ಲ. ಒಂದು ಮತದಲ್ಲಿ ದೈವಗ್ರಂಥವಿದ್ದರೂ ಅವರು ಗ್ರಂಥವನ್ನು ವಿಶ್ವಾಸಿಸದೇ ಮತ ಎಲ್ಲದಕ್ಕೂ ಹಿರಿಯನಾಗಿರುವ ತಮ್ಮ ಮತ ಹಿರಿಯನ ಮಾತನ್ನೇ ಹೆಚ್ಚಾಗಿ ವಿಶ್ವಾಸಿಸುತ್ತಿರುವರು. ಕೆಲವು ಮತಗಳಲ್ಲಿ ಮನುಷ್ಯರ ಮೇಲೆ ಅಧಿಕಾರವೆಲ್ಲವೂ ಮತಹಿರಿಯರೇ ಹೊಂದಿದ್ದು ತಮ್ಮ ಆಜ್ಞೆಯನ್ನನುಸರಿಸಿ ಮತದಲ್ಲಿನ ಮನುಷ್ಯರೆಲ್ಲರೂ ನಡೆದುಕೊಳ್ಳುವಂತೆ ಶಾಸಿಸುತ್ತಿರುವರು.

ಮತಕ್ಕೆ ಗ್ರಂಥವಿದ್ದರೂ ಅದು ದೈವದೊಂದಿಗೆ ಸಮಾನವಾದರೂ ಅದನ್ನು ವಿವರಿಸಿ ಹೇಳುವೆವೆಂದು ಕೆಲವರು ಹಿರಿಯರು ತಯಾರಾಗಿ ಅವರು

ಮತವೆಲ್ಲವನ್ನು ತಮ್ಮ ಮಾತಿನ ಮೇಲೆ ನಡೆಸುತ್ತಿರುವವರು. ಗ್ರಂಥದಲ್ಲಿ ಕೆಲವು ಮತ ಹಿರಿಯರಿಗೆ ಒಪ್ಪುವಂತಹ ವಿಷಯಗಳಿದ್ದರೂ, ಕೆಲವು ಒಪ್ಪದಂತಹ ವಿಷಯಗಳು ಸಹ ಇರುತ್ತವೆ. ತಮ್ಮ ಪ್ರವರ್ತನೆಗೆ ಭಿನ್ನವಾಗಿ ಇರುವ ಜ್ಞಾನವಿಷಯಗಳೆಲ್ಲವೂ ಮತ ಹಿರಿಯರಿಗೆ ಒಪ್ಪಿಗೆ ಇಲ್ಲದಂತಹ ವಿಷಯಗಳಾಗಿ ಇರುತ್ತವೆ. ಆಗ ಅಂತಹ ವಿಷಯಗಳನ್ನು ಬಚ್ಚಿಟ್ಟು ಹೇಳುವುದಿಲ್ಲ. ಯಾರಾದರೂ ಆ ವಿಷಯಗಳನ್ನು ಕೇಳಿದರೂ ಆ ವಿಷಯಗಳನ್ನು ಆಚರಿಸಬಾರದೆಂದು, ಅವು ದೇವರಿಗೆ ಒಪ್ಪಿಗೆ ಇಲ್ಲದಂತಹ ವಿಷಯಗಳೆಂದು ಹೇಳಿ ಸರಿಮಾಡುತ್ತಾರೆ. ದೇವರು ಗ್ರಂಥದಲ್ಲಿ ಈ ಕೆಲಸವನ್ನು ಮಾಡಲು ಹೇಳಿದ್ದರೆ, ಕೆಲವರು ಹಿರಿಯರು ಆ ಕೆಲಸವನ್ನು ಮಾಡಬಾರದೆಂದು ಆಜ್ಞೆ ಮಾಡುತ್ತಿದ್ದಾರೆ. ಪ್ರಜೆಗಳು ತಾವು ಹೇಳಿದಂತೆ ಕೇಳಬೇಕೆಂದು ಮೊದಲೇ ಹೇಳಿ ನಿಯಮವನ್ನು ಇಟ್ಟಿರುವುದರಿಂದ ಆ ನಿಯಮದ ಪ್ರಕಾರ ಅವರ ಹಿರಿಯರು ಹೇಳಿರುವ ಮಾತನ್ನೇ ಕೇಳುತ್ತಿದ್ದಾರೆ. ದೇವರು ಹೇಳಿದ ವಿಷಯ ಕಾಣಿಸಿದರೂ ನೋಡದಂತೆ ಬಿಟ್ಟುಹಾಕುತ್ತಿದ್ದಾರೆ. ಹಿರಿಯರು ಹೇಳಿದಂತೆ ಕೇಳುವುದು “ಷರಿಯತ್” ಎನ್ನುತ್ತಿದ್ದಾರೆ. ಹೀಗೆ ಮೊದಲೇ ಮನುಷ್ಯರು ತಮ್ಮ ಮಾತನ್ನು ಕೇಳುವಂತೆ ತಮಗೆ ಜ್ಞಾನವೆಲ್ಲವೂ ತಿಳಿದಿದೆ ಎನ್ನುವಂತೆ ಪ್ರವರ್ತಿಸುತ್ತಿರುವವರು.

ಒಂದು ದೈವ ಗ್ರಂಥದಲ್ಲಿ ದೇವರು ಒಂದು ಕಡೆಗೆ ತಿರುಗಿ ಕೈಮುಗಿಯಬೇಕೆಂದು ಹೇಳಿದ್ದಾನೆಂದುಕೊಳ್ಳಿ. ಅದು ದೇವರ ವಾಕ್ಕು ಎಲ್ಲರಿಗೂ ದೇವರು ಆಮೋದಯೋಗ್ಯವಾಗಿ, ಜ್ಞಾನಮಾರ್ಗದಲ್ಲಿ ಮುಂದಕ್ಕೆ ಹೋಗುವಂತೆ ಹೇಳಿರುತ್ತಾನೆ. ಆದರೆ ಆ ದಿಕ್ಕು ತಮ್ಮ ಮತ ಹಿರಿಯರಿಗಾಗಲೀ, ತಮ್ಮ ಗುರುಗಳಿಗಾಗಲೀ ಒಪ್ಪಿಗೆ ಇಲ್ಲದಂತಹವುಗಳಾಗಿದ್ದರೆ ಆ ದಿಕ್ಕಿಗೆ ತಿರುಗಿ ಕೈಮುಗಿಯಬಾರದೆಂದು ಹೇಳುತ್ತಾರೆ. ಆಗ ತಮ್ಮ ಗ್ರಂಥದಲ್ಲಿನ ಮಾತನ್ನು ಬಿಟ್ಟು ತಮ್ಮ ಹಿರಿಯರು ಹೇಳಿದ ಮಾತನ್ನೇ ಮನುಷ್ಯ ಕೇಳುತ್ತಿದ್ದಾನೆ. ಹಾಗೆ ಕೇಳುವುದನ್ನು ನಿಯಮ ಎನ್ನುತ್ತಿದ್ದಾರೆ. ಇಲ್ಲಿ ದೇವರು ತನ್ನ ಗ್ರಂಥವನ್ನು ಕೊಟ್ಟು, ಅದಕ್ಕೆ ದೈವಗ್ರಂಥವೆಂದು ಹೆಸರಿಟ್ಟರೂ, ದೈವಗ್ರಂಥದಲ್ಲಿನ ಮಾತಿಗಿಂತ

ಮನುಷ್ಯರ ಮಾತುಗಳೇ ಮುಖ್ಯವೆಂದು ಮನುಷ್ಯ ಅಂದುಕೊಳ್ಳುವುದು ನಡೆಯುತ್ತಿದೆ. ಹಾಗೆ ಅಂದುಕೊಳ್ಳಬಾರದು. ಮನುಷ್ಯರ ಭಾವವನ್ನನುಸರಿಸಿ ನೀನು ಹೋಗಬೇಡವೆಂದು ದೈವಗ್ರಂಥವಾದ ಖುರಾನ್‌ನಲ್ಲಿ ಒಂದು ಕಡೆ ಹೇಳಿದ್ದಾನೆ ನೋಡಿರಿ. ಸೂರಾ ಐದು, ಆಯತ್ 48 (**5-48**) **"ನಾವು ನಿಮ್ಮ ಕಡೆಗೆ ಈ ಖುರಾನ್ ಗ್ರಂಥವನ್ನು ಸತ್ಯಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತಮಗಿಂತ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ಧೃಢೀಕರಿಸುತ್ತದೆ. ನಿನ್ನ ಬಳಿಗೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನೋಇಚ್ಛೆಗಳನ್ನು ಅನುಸರಿಸಬೇಡ"** ಎಂದು ಇದೆ. ಇಲ್ಲಿ ಅವರ ಮನೋಇಚ್ಛೆಗಳನ್ನು ಎಂದು ಹೇಳುವುದರಲ್ಲಿ ಅರ್ಥವನ್ನು ನೋಡಿದರೆ ನಿನಗೆ ಹೇಳುವ ಮನುಷ್ಯರ ಮಾತುಗಳನ್ನು ಕೇಳಬೇಡವೆಂದು, ಅವರ ಇಚ್ಛೆ ಪ್ರಕಾರ ನೀನು ನಡೆದರೆ ತಪ್ಪು ದಾರಿ ಹಿಡಿದು ಅಸತ್ಯ ಮಾರ್ಗದೊಳಗೆ ಹೋಗುತ್ತೀಯಾ ಎಂದು ಇಲ್ಲಿ ದೇವರು ಎಚ್ಚರಿಸಿ ಹೇಳಿದ್ದಾನೆ. ಆದ್ದರಿಂದ **"ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನೋಇಚ್ಛೆಗಳನ್ನು ಅನುಸರಿಸಬೇಡ"** ಎಂದು ಎಚ್ಚರಿಸಿ ಹೇಳಿದಂತಿದೆ.

ಆದರೂ ಮನುಷ್ಯ ದೈವ ಗ್ರಂಥದಲ್ಲಿನ ದೇವರ ಮಾತನ್ನು ಕೇಳದಂತೆ ಮತ ಹಿರಿಯರನ್ನೋ, ಮತ ಗುರುಗಳನ್ನೋ, ಗುರುಗಳೆಂದು ಹೇಳಿಕೊಳ್ಳುವ ಮನುಷ್ಯರ ಮಾತುಗಳನ್ನೇ ಕೇಳುತ್ತಿದ್ದಾನೆ. ಹಾಗೆ ಕೇಳುವುದರಿಂದ ಮನುಷ್ಯನಿಗಿಂತ ದೇವರೇ ಕಡಿಮೆಯಾದಂತೆ ನೀನು ಹೇಳಿಕೊಳ್ಳುವ ಮನುಷ್ಯರೇ ದೇವರಿಗಿಂತ ದೊಡ್ಡವರೆನ್ನುವಂತೆ ಲೆಕ್ಕಿಸುತ್ತಿದ್ದೀಯೆಂದು ದೇವರು ಅಂದುಕೊಳ್ಳಬೇಕಾಗಿ ಬರುತ್ತಿದೆ. ಮನುಷ್ಯ ಯಾವಾಗಾದರೂ ದೇವರನ್ನೇ ದೊಡ್ಡದಾಗಿ ನಂಬಬೇಕಾಗಿರುವಾಗ, ಎಲ್ಲ ವಿಧಗಳಲ್ಲಿ ದೇವರೇ ದೊಡ್ಡದಾಗಿರುವಾಗ, ದೇವರನ್ನು ಅಲ್ಲಗಳೆದು ನಮ್ಮ ಮತ ಹಿರಿಯರೆಂದು, ನಮ್ಮ ಮತ ಗುರುಗಳೆಂದು ಹೇಳಿಕೊಳ್ಳುತ್ತಾ ಅವರ ಮಾತನ್ನು ಕೇಳಿದರೇ ದೇವರನ್ನು ಮನುಷ್ಯ ಅವಮಾನಿಸಿದಂತಲ್ಲವೆ, ಜ್ಞಾನ ತಿಳಿಯಬೇಕಾದವನು ದೇವರನ್ನು ಗೌರವಿಸಬೇಕು.

ಗೌರವದಿಂದ ನೋಡಬೇಕು. ಹಾಗಲ್ಲದೆ ದೇವರು ಹೇಳಿದ ಮಾತುಗಳನ್ನು, ನಿದರ್ಶನಗಳನ್ನು, ಸನ್ಮಾರ್ಗಗಳನ್ನು ಬಚ್ಚಿಟ್ಟು ಪ್ರಜೆಗಳಿಗೆ ತಿಳಿಯದಂತೆ ಮಾಡಿದರೂ, ಒಂದುವೇಳೆ ಪ್ರತ್ಯಕ್ಷವಾಗಿ ಹೇಳಿದ್ದರೂ ವಿಷಯವನ್ನು ಅಲ್ಲಗಳೆದು ಅದು ಆಚರಿಸಬಾರದೆಂದು ದೇವರ ಮಾತನ್ನು ಅಲ್ಲಗಳೆದರೂ, ಅವರು ದೇವರಿಗೆ ಶತ್ರುಗಳೊಂದಿಗೆ ಸಮಾನವಲ್ಲವೆ! ಅವರು ಯಾವ ರೀತಿಯಾಗಿ ದೇವರನ್ನು ಗೌರವಿಸಿದಂತೆ, ದೇವರನ್ನು ದೊಡ್ಡದಾಗಿ ನೋಡಿದಂತೆ? ನಾವು ಜ್ಞಾನಿಗಳೆನ್ನುವ ಗರ್ವದಿಂದಲೋ, ನಾವು ಮತ ಹಿರಿಯರು, ಮತ ಗುರುಗಳೆನ್ನುವ ಅಹಂನಿಂದಲೋ, ತಾವು ಹೇಳಿದಂತೆ ಕೇಳಬೇಕೆಂದು ಹೇಳುವವರನ್ನು ಕುರಿತು ಅಂತಿಮ ದೈವ ಗ್ರಂಥ ಖುರಾನ್‌ನಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

ಸೂರಾ 2, ಆಯತ್ 159 (**2-159**) **"ನಾವು ಅವತರಿಸುವಂತೆ ಮಾಡಿದ ನಿದರ್ಶನಗಳನ್ನು ಮತ್ತು ಸನ್ಮಾರ್ಗವನ್ನು, ಪ್ರಜೆಗಳಿಗಾಗಿ ಗ್ರಂಥದಲ್ಲಿ ವಿಶಧಪಡಿಸಿದ ನಂತರವೂ ಸಹ ಅವುಗಳನ್ನು ಬಚ್ಚಿಡುವವರನ್ನು ದೇವರು ಶಪಿಸುತ್ತಾನೆ. ಇನ್ನೂ ಶಪಿಸುವವರು ಸಹ ಅವರನ್ನು ಶಪಿಸುತ್ತಾರೆ"** ಎಂದು ಇದೆ. ದೇವರು ಹೇಳಿದ ಈ ಮಾತನ್ನು ತಿಳಿದೂ ಸಹ ತಮ್ಮ ನಿಯಮವೆಂದೂ, ಷರಿಯತ್ ಎಂದೂ ಪ್ರಜೆಗಳಿಗೆ ಹೇಳಿ, ತಮ್ಮ ಮಾತನ್ನೇ ಕೇಳಬೇಕೆಂದು ಭಯ ಇಡುವವರನ್ನು ದೇವರು ಶಪಿಸುತ್ತಾನೆಂದು ಇದೆಯಲ್ಲವೆ! ದೇವರು ಶಪಿಸಿದರೇ ಅದಕ್ಕೆ ಎದುರು ಇರುವುದಿಲ್ಲ. ತಮ್ಮ ಹಿರೆತನಕ್ಕಾಗಿ ದೇವರ ಮಾತನ್ನು ಅಲ್ಲಗಳೆದು ದೇವರ ಶಾಪವನ್ನು ಏಕೆ ಹೊಂದಬೇಕು? ದೇವರ ಶಾಪ ಎಂದರೆ ಅಷ್ಟು ಸುಲಭವಾಗಿ ಇರುತ್ತದಾ! ನೀವೇ ಆಲೋಚಿಸಿಕೊಳ್ಳಿ. ಘೋರವಾದ ನರಕವನ್ನು ಅನುಭವಿಸಬೇಕಾಗಿ ಬರುತ್ತದೆಂದು ಮರೆಯಬಾರದು. ಇಷ್ಟು ಕಠಿಣವಾಗಿ ದೇವರು (ಅಲ್ಲಾಹ್) ತನ್ನ ಆಯತ್‌ನಲ್ಲಿ ಹೇಳಿದ್ದರೂ ಮನುಷ್ಯ ಆ ಮಾತನ್ನು ಲೆಕ್ಕ ಮಾಡದಂತೆ ಹೇಗೆ ಪ್ರವರ್ತಿಸುತ್ತಿದ್ದಾನೋ, ಖುರಾನ್‌ನಲ್ಲಿನ ದೇವರ ಆಯತ್‌ಗಳನ್ನು ಹೇಗೆ ತಪ್ಪುದಾರಿಹಿಡಿಸುತ್ತಿದ್ದಾರೋ ತಿಳಿಯುವುದಕ್ಕೆ ಉದಾಹರಣೆಯಾಗಿ ಅಂತಿಮ ದೈವಗ್ರಂಥ ಖುರಾನ್‌ನಲ್ಲಿಯೇ

ಒಂದು ಆಯತ್‌ನ್ನು ತೆಗೆದುಕೊಂಡು ಅದರಲ್ಲಿ ದೇವರು (ಅಲ್ಲಾಹ್) ಏನು ಹೇಳಿದ್ದಾನೋ ಅದನ್ನು ಮನುಷ್ಯ ಹೇಗೆ ಅಲ್ಲಗಳೆಯುತ್ತಿದ್ದಾನೋ ಒಂದು ಬಾರಿ ನೋಡೋಣ.

ಸೂರಾ 15, ಆಯತ್ 29 ಮತ್ತು 30ರಲ್ಲಿ ಹೀಗೆ ಇದೆ ನೋಡಿರಿ. (15–29, 30, 31, 32, 33) **"(29) ನಾನು ಆತನನ್ನು ಪೂರ್ತಿಯಾಗಿ ತಯಾರಿಸಿ ಆತನಲ್ಲಿ ನನ್ನ ಆತ್ಮವನ್ನು ಊದಿದಾಗ, ನೀವೆಲ್ಲಾ ಆತನ ಮುಂದೆ ಸಾಷ್ಟಾಂಗವೆರಗಿರಿ. (30) ದೇವತೆಗಳೆಲ್ಲರೂ ಸಾಷ್ಟಾಂಗವೆರಗಿದರು. (31) ಇಲ್ಲಿ ಇಬ್ಲೀಸು ಹೊರತು ಸಾಷ್ಟಾಂಗವೆರಗುವವರಲ್ಲಿ ಎಲ್ಲರೂ ಸಾಷ್ಟಾಂಗವೆರಗಿದರು. (32) ಓ ಇಬ್ಲೀಸ್! ಸಾಷ್ಟಾಂಗವೆರಗುವವರಲ್ಲಿ ನೀನು ಏಕೆ ಸೇರಲಿಲ್ಲ? ಎಂದು ಅಲ್ಲಾಹ್ (ದೇವರು) ಕೇಳಿದ್ದಾನೆ. (33) ಕೊಳೆತು ಒಣಗಿದ ಕಪ್ಪನೆಯ ಮಣ್ಣಿನಿಂದ ನೀನು ಸೃಷ್ಟಿಸಿದ ಮನುಷ್ಯನ ಮುಂದೆ ನಾನು ಸಾಷ್ಟಾಂಗವೆರೆಗುವುದಿಲ್ಲ"** ಎಂದು ಕಡಾಖಂಡಿತವಾಗಿ ಹೇಳಿದನು. ಎಂದು ಬರೆಯಲ್ಪಟ್ಟಿದೆ. ಇಲ್ಲಿ ನಡೆದ ವಿಷಯವೇ ನೆಂದರೇ 26ನೇ ವಾಕ್ಯದಲ್ಲಿ ನಾವು ಮನುಷ್ಯನನ್ನು ಕೊಳೆತು ಚೆನ್ನಾಗಿ ಒಣಗಿದ ಮಣ್ಣಿನಿಂದ ಸೃಷ್ಟಿಸಿದ್ದೇವೆ ಎಂದು ಇದೆ. ಇಲ್ಲಿ ಈ ಮಾತನ್ನನುಸರಿಸಿ ನೋಡಿದರೆ ಇಲ್ಲಿಯವರೆಗು ಸೃಷ್ಟಿಸಿದ ಮನುಷ್ಯರನ್ನು ಕಪ್ಪನೆಯ ಮಣ್ಣಿನಿಂದ ಸೃಷ್ಟಿಸಿದ್ದೇವೆಂದು ಹೇಳಿದ್ದಾನೆ. ಹಾಗೆಯೇ ಮನುಷ್ಯರೆಲ್ಲರೂ ತಯಾರಾಗಿದ್ದಾರೆಂದು ಇದನ್ನನುಸರಿಸಿ ತಿಳಿಯುತ್ತಿದೆ. 27ನೇ ವಚನದಲ್ಲಿ ಜಿನ್ನಾತರನ್ನು ಎಂದರೆ ದೇವತೆಗಳನ್ನು ತೀವ್ರವಾದ ಉಷ್ಣ ಜ್ವಾಲೆಯಿಂದ ಸೃಷ್ಟಿಸಿದ್ದೇವೆ ಎಂದು ಹೇಳಿದ್ದಾನೆ. ಇದನ್ನನುಸರಿಸಿ ಮಾನವರ ಸೃಷ್ಟಿ ಒಂದು ವಿಧ, ದೇವತೆಗಳ ಸೃಷ್ಟಿ ಮತ್ತೊಂದು ವಿಧವಾಗಿ ಇದೆಯೆಂದು, ಮನುಷ್ಯರ ಶರೀರಗಳನ್ನು ಮಣ್ಣಿನಿಂದ, ದೇವತೆಗಳ ಶರೀರಗಳನ್ನು ಜ್ವಾಲೆಯಿಂದ ಸೃಷ್ಟಿಸಿದ್ದೇನೆಂದು ಹೇಳಿದ್ದಾನೆ. ನಂತರ 28ನೇ ಆಯತ್‌ನಲ್ಲಿ ಮಣ್ಣಿನಿಂದಲೇ ನಾನು ಒಬ್ಬ ಮನುಷ್ಯನನ್ನು ಸೃಷ್ಟಿಸುತ್ತಿದ್ದೇನೆಂದು ಪ್ರತ್ಯೇಕವಾಗಿ ದೇವರು ಹೇಳಿದ್ದಾನೆ. ಹಾಗೆ ಹೇಳುವುದರಿಂದ ಮನುಷ್ಯನಹಾಗೆ

ಇರುವ ಒಬ್ಬ ಪ್ರತ್ಯೇಕವಾದ ವ್ಯಕ್ತಿ (ಮನುಷ್ಯ) ಹುಟ್ಟುತ್ತಿದ್ದಾನೆಂದು ಮೊದಲೇ ತಿಳಿಸಿದ್ದಾನೆ. ಆತನು ಪ್ರತ್ಯೇಕತೆ ಹೊಂದಿರುವುದರಿಂದ ಆತನನ್ನು ದೇವ ದೂತರೆಲ್ಲರೂ ನಮಸ್ಕರಿಸಿದ್ದಾರೆ. ದೂತರು ನಮಸ್ಕರಿಸಿದ್ದಾರೆಂದರೆ ಅವನು ದೇವರೊಂದಿಗೆ ಸಮಾನವಾದವನೇ ಆಗಿರುತ್ತಾನೆ.

ಇಲ್ಲಿ ಮಣ್ಣಿನಿಂದ ತಯಾರಿಸಿದ ಮನುಷ್ಯನಲ್ಲಿ ನನ್ನ ಆತ್ಮವನ್ನು ಊದಿದ್ದೇನೆ ಎಂದು ಅಲ್ಲಾಹ್‌ಯೇ ಹೇಳಿರುವುದರಿಂದ ಬಂದಿರುವ ಮನುಷ್ಯ ಅಲ್ಲಾಹ್ ಆತ್ಮವೇಯೆಂದು ಹೇಳಬಹುದು. ಅಲ್ಲಾಹ್ ಆತ್ಮ ಇರುವುದರಿಂದ ಆ ಮನುಷ್ಯನನ್ನು ಪ್ರತ್ಯೇಕವಾದ ದೇವರ ಅವತಾರವೆಂದು ಹೇಳಬಹುದು. ದೇವರು ಹುಟ್ಟುವವನಲ್ಲ. ಯಾರೊಂದಿಗೂ ನೇರವಾಗಿ ಮಾತನಾಡುವವನಲ್ಲ. ಆದರೇ ಆತನ ಜ್ಞಾನವು ಆತನಿಗೇ ತಿಳಿದಿದೆ. ಅಲ್ಲಾಹ್ ಜ್ಞಾನವು (ದೇವರ ಜ್ಞಾನ) ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯದಿರುವುದರಿಂದ, ದೇವರ ಜ್ಞಾನ ಮನುಷ್ಯರಿಗೆ ತಿಳಿಯಬೇಕೆಂದರೇ ದೇವರು ಮನುಷ್ಯನಹಾಗೆ ಮಾರುವೇಷದಲ್ಲಿ ಬಂದಂತೆ ಬರಬೇಕಾಗಿರುವುದೇ. ದೇವರು ಮನುಷ್ಯನಹಾಗೆ ಬಂದು ಮನುಷ್ಯರಿಗೆ ಜ್ಞಾನವನ್ನು ಹೇಳಬೇಕಾಗಿರುತ್ತದೆ. ಹಾಗೆ ದೇವರು ಮನುಷ್ಯನಹಾಗೆ ಬಂದರೆ ಆತನು ಸಾಧಾರಣ ಮನುಷ್ಯನಲ್ಲ. ಆತನ ಇಷ್ಟದ ಪ್ರಕಾರ ಬಂದಿರುವವನಾದ್ದರಿಂದ ಆತನನ್ನು ಪ್ರತ್ಯೇಕವಾದ ಹೆಸರಿನಿಂದ ಭಗವಂತನು ಎನ್ನುತ್ತಾರೆ. ಸಾಮಾನ್ಯ ಮನುಷ್ಯರು ಕರ್ಮ ಅಧೀನದಲ್ಲಿದ್ದು ಕರ್ಮದಿಂದ ಹುಟ್ಟುತ್ತಿರುವರು. ಹುಟ್ಟುವಿಕೆಯಲ್ಲಿ ಯಾರ ಇಷ್ಟ ಕೆಲಸಕ್ಕೆ ಬರುವುದಿಲ್ಲ. ಕರ್ಮದಿಂದ ಮನುಷ್ಯ ಸಾಯಿಸಲ್ಪಡುತ್ತಿದ್ದಾನೆ. ಹಾಗೆಯೇ ಕರ್ಮದಿಂದ ಮನುಷ್ಯ ಹುಟ್ಟುತ್ತಿದ್ದಾನೆ. ಮನುಷ್ಯ ಇಷ್ಟಾಯಿಷ್ಟಗಳೊಂದಿಗೆ ಸಾವುಹುಟ್ಟುಗಳಿರುವುದಿಲ್ಲ. ಮನುಷ್ಯನಿಗೆ ಬಲವಂತವಾದ ಸಾವುಗಳು, ಬಲವಂತ ಹುಟ್ಟುಗಳೇ ಇರುತ್ತವೆ ಹೊರತು ಸಾವಾಗಲೀ, ಹುಟ್ಟುವಿಕೆಯಾಗಲೀ ಮನುಷ್ಯನಿಗೆ ಇಷ್ಟಬಂದಂತೆ ಇರುವುದಿಲ್ಲ. ದೇವರು ಒಬ್ಬನೇ ಭಗವಂತನಾಗಿ ತನ್ನ ಇಷ್ಟದ ಪ್ರಕಾರ ಹುಟ್ಟುತ್ತಾನೆ, ತನ್ನ ಇಷ್ಟದ ಪ್ರಕಾರ ಮರಣಿಸುವನು. ಅಂತಹವನು

ಭಗವಂತನಾದ್ದರಿಂದ ಭಗವಂತನು ದೇವರ ಆತ್ಮದೊಂದಿಗೆ ಹುಟ್ಟಿದಾಗ ದೂತರೆಲ್ಲರೂ ಸಾಷ್ಟಾಂಗ ನಮಸ್ಕಾರ ಮಾಡಿದ್ದಾರೆ. ದೇವದೂತರು ಕಾಣಿಸುವವರಲ್ಲ. ಆದ್ದರಿಂದ ಅವರು ಭಗವಂತನಿಗೆ ನಮಸ್ಕಾರ ಮಾಡಿದ ವಿಷಯ ನಮಗೆ ತಿಳಿದಿಲ್ಲ. ಭಗವಂತನನ್ನು ನಿತ್ಯ ಕಾಣಿಸದವರು ಎಷ್ಟೋ ಮಂದಿ ನಮಸ್ಕರಿಸುತ್ತಿರುತ್ತಾರೆ. ಆದರೇ ಮನುಷ್ಯರ ಮಧ್ಯದಲ್ಲಿರುವ ಭಗವಂತನ್ಯಾರೋ ಮನುಷ್ಯರಿಗೆ ತಿಳಿಯುವುದಕ್ಕೆ ಅವಕಾಶವೇ ಇಲ್ಲ. ಆದ್ದರಿಂದ ದೇವರಾದ ಭಗವಂತನು ಸಹ ಸಾಧಾರಣ ಮನುಷ್ಯರಲ್ಲಿ ಬೆರೆತುಹೋಗಿ ಎಲ್ಲರ ದೃಷ್ಟಿಯಲ್ಲಿ ಸಾಧಾರಣ ಮನುಷ್ಯನ ಹಾಗೆ ಲೆಕ್ಕಿಸಲ್ಪಡುತ್ತಾನೆ. ಆತನು ಸಾಧಾರಣ ಮನುಷ್ಯನಹಾಗೆ ಇರುವುದರಿಂದ ಧನ ಇರುವವನು, ಅಧಿಕಾರ ಇರುವವನು ಮದದಿಂದ ದೇವರಾದ ಭಗವಂತನನ್ನು ಕೆಲವು ಸಮಯಗಳಲ್ಲಿ ದೂಷಿಸುತ್ತಿರುವರು. ಭಗವಂತನಿಗೆ ಸಾಷ್ಟಾಂಗ ನಮಸ್ಕಾರ ಮಾಡುವ ದೇವತೆಯನ್ನು ದೊಡ್ಡದಾಗಿ ಕೈಮುಗಿಯುವವರು ಭಗವಂತನನ್ನು ದೂಷಿಸುವುದನ್ನು ನೋಡಿ ದೇವತೆಗಳೇ ಮನುಷ್ಯರು ಮಾಡುವ ಪಾಪಕ್ಕೆ ಆಶ್ಚರ್ಯಪಡುತ್ತಿರುವರು. ಆದ್ದರಿಂದ ಅದೇ ದೇವತೆಗಳೇ ಮನುಷ್ಯರನ್ನು ಕ್ರೂರವಾಗಿ ಶಿಕ್ಷಿಸುತ್ತಿರುವರು.

ದೇವರ ಆತ್ಮವೇ ಮನುಷ್ಯನ ರೂಪದಲ್ಲಿ ಬಂದರೇ, ಮನುಷ್ಯರಲ್ಲಿ ಗುಣ ಮಾಯೆ ಆವರಿಸಿ ಆತನನ್ನು ಗೌರವಿಸುವುದಿಲ್ಲ. ಮಾಯೆಯಿಂದ ಅಜ್ಞಾನದಲ್ಲಿರಿಸಲ್ಪಟ್ಟ ಮನುಷ್ಯರು ಒಬ್ಬ ವ್ಯಕ್ತಿ ಪ್ರತ್ಯೇಕವಾಗಿ ಕಾಣಿಸಿದರೂ, ಆತನು ದೈವಗ್ರಂಥವನ್ನು ಬೋಧಿಸುತ್ತಿದ್ದರೂ, ಭಗವಂತನೊಂದಿಗೆ ಸಮಾನವಾಗಿ ಇದ್ದಾನೆಂದು ಕೆಲವರು ತಿಳಿದ ಜ್ಞಾನಿಗಳು ಹೇಳಿಕೊಳ್ಳುತ್ತಿದ್ದರೂ, ದೇವರೇ ಇಳಿದು ಬಂದು ಈತನು ಮನುಷ್ಯನಲ್ಲ ಸಾಕ್ಷ್ಯಾತ್ತು ನನ್ನ ಅವತಾರವೇಯೆಂದು ಹೇಳಿದರೂ, ಅವರ ಮತ ನಿಯಮಗಳ ಪ್ರಕಾರ ನಾವು ಅಲ್ಲಾಹ್‌ನ್ನು ಹೊರತುಪಡಿಸಿ ಯಾರಿಗೂ ನಮಸ್ಕರಿಸುವುದಿಲ್ಲ ಎಂದು ಅನ್ನುತ್ತಿದ್ದಾರೆ. ಶೂನ್ಯದಲ್ಲಿರುವ ಅಲ್ಲಾಹ್‌ನ್ನು ಗಾಳಿಯಲ್ಲಿ ಕೈಮುಗಿಯುವುದು ಹೊರತು

ಪ್ರತ್ಯಕ್ಷವಾಗಿ ಇರುವ ದೇವರ ಅವತಾರವನ್ನು ಕೈಮುಗಿಯದಂತಿದ್ದಾರೆ. ಈತನು ನಿನಗಿಂತ ದೊಡ್ಡವನೇ ಅಲ್ಲವೆ! ಜ್ಞಾನದಲ್ಲಿ ದೇವರ ಜ್ಞಾನವನ್ನೇ ಪ್ರತ್ಯಕ್ಷವಾಗಿ ಹೇಳುತ್ತಿದ್ದಾನಲ್ಲವೆ! ಎಂದು ಕೇಳಿದರೂ ನಮ್ಮ ಮತ ಹಿರಿಯರ ಮಾತಿನ ಪ್ರಕಾರ ದೇವರೇ ಇಳಿದು ನಮ್ಮ ಮುಂದಕ್ಕೆ ಬಂದರೂ ನಾವು ಪ್ರತ್ಯಕ್ಷವಾಗಿ ಯಾರನ್ನೂ ಕೈ ಮುಗಿಯುವುದಿಲ್ಲ ಎಂದು ಅನ್ನುತ್ತಿದ್ದಾರೆ. ಹಾಗೆ ಮುಗಿದರೆ ನಮ್ಮ ಹಿರಿಯರ ಮಾತನ್ನು ಧಿಕ್ಕರಿಸಿದಂತಾಗುತ್ತದೆಂದು ಹೇಳುತ್ತಿದ್ದಾರೆ. ಸೂರಾ 5, ಆಯತ್ 48ರಲ್ಲಿ ಅಲ್ಲಾಹ್ ಆಯತ್‌ನಲ್ಲಿ ಮನುಷ್ಯರ ಮನೋ ಇಚ್ಛೆಗಳ ಪ್ರಕಾರ ನೀನು ನಡೆಯಬೇಡ ಎಂದು ಹೇಳಿದ್ದರೂ, ಮನುಷ್ಯರನ್ನು ದೊಡ್ಡದಾಗಿ ತಿಳಿದು ಅವರು ದೇವರನ್ನು ಮುಗಿಯಬೇಡವೆಂದು ಹೇಳಿದರೂ ಕೈ ಮುಗಿಯದಂತಿದ್ದಾ ರೆಂದರೇ 48ನೇ ವಾಕ್ಯದಲ್ಲಿ ದೇವರು ಹೇಳಿದ ಮಾತಿಗೆ ಇವರು ವಿರುದ್ಧವಾಗಿ ಪ್ರವರ್ತಿಸಿದಂತಲ್ಲವೆ? ಹೀಗೆ ದೈವಗ್ರಂಥದಲ್ಲಿನ ಮಾತಿಗಿಂತ ಮತ ಹಿರಿಯರ ಮಾತುಗಳನ್ನೇ ದೊಡ್ಡದಾಗಿ ಆಚರಿಸುವವರಿಗೆ ದೇವರ ಜ್ಞಾನ ಎಷ್ಟು ಯುಗಗಳಾದರೂ ತಿಳಿಯುವುದಿಲ್ಲ.

ದೇವರ ಜ್ಞಾನ ಮೂರು ದೈವಗ್ರಂಥಗಳಲ್ಲಿ ಇದೆಯೆಂದು ತಿಳಿಯದೆ, ದೈವಗ್ರಂಥಗಳನ್ನು ಪಕ್ಕದಲ್ಲಿಟ್ಟು ಮನುಷ್ಯರನ್ನು ಗುರುಗಳಾಗಿ ಮಾಡಿಕೊಂಡು, ಅವರು ಹೇಳಿದಂತೆ ಮಾಡುವವರು ಪ್ರತಿ ಮತದಲ್ಲಿಯೂ ಇದ್ದಾರೆ. ಮನುಷ್ಯರನ್ನು ಗುರುಗಳಾಗಿ, ಹಿರಿಯರಾಗಿ ಲೆಕ್ಕಿಸಿ ದೈವಗ್ರಂಥದಲ್ಲಿನ ದೇವರ ಮಾತುಗಳನ್ನು ಕೇಳದವರು, ಅನುಸರಿಸದವರು ತಾವು ಜ್ಞಾನಿಗಳೆಂದುಕೊಳ್ಳುತ್ತಾ, ಸ್ವಲ್ಪ ಕಾಲ ಕಳೆದಾಗ ಅವರು ಸಹ ಗುರುಗಳಾಗಿ, ಸಮಾಜ ಹಿರಿಯರಾಗಿ ತಯಾರಾಗಿ ಅವರ ನಿಯಮಗಳ ಪ್ರಕಾರ ಪ್ರಜೆಗಳು ನಡೆಯಬೇಕೆಂದು ಹೇಳುತ್ತಾ, ಮನುಷ್ಯರನ್ನು ಮತಕ್ಕೊಂದು ವೇಷ, ಕುಲಕ್ಕೊಂದು ಆಚರಣೆ ಎಂದು ಏರ್ಪಡಿಸಿದ್ದಾರೆ. ಆದ್ದರಿಂದ ಹಿಂದೂಗಳ ಹಾಗೆ ಕ್ರೈಸ್ತರು ಕಾಣಿಸುವುದಿಲ್ಲ, ಕ್ರೈಸ್ತರಹಾಗೆ ಮುಸ್ಲಿಮ್‌ರು ಕಾಣಿಸುವುದಿಲ್ಲ. ಮುಸ್ಲಿಮ್‌ರ ಹಾಗೆ ಯಾವ ಮತದವರೂ ಇಲ್ಲ. ಮೂರು ಮತದವರು ಪ್ರತ್ಯೇಕ ವೇಷಧಾರಣೆಯಲ್ಲಿ

ಕಾಣಿಸುತ್ತಿದ್ದಾರೆ. ವಾಸ್ತವವಾಗಿ ಭಗವದ್ಗೀತೆಯಲ್ಲಾಗಲಿ, ಬೈಬಲ್‌ನಲ್ಲಾಗಲಿ, ಖುರಾನ್ ಗ್ರಂಥದಲ್ಲಾಗಲಿ ಎಲ್ಲಾದರೂ ವೇಷಧಾರಣೆಯನ್ನು ಕುರಿತು ಒಂದು ಮಾತಾದರೂ ಇದೆಯಾ? ಇಲ್ಲ. ಮೂರು ದೈವಗ್ರಂಥದಲ್ಲಿ ಶರೀರದೊಳಗೆ ಜ್ಞಾನವನ್ನು ಕುರಿತು ಹೇಳಿದಾಗ, ಮೂರು ದೈವಗ್ರಂಥದಲ್ಲಿನ ಮಾತುಗಳನ್ನು ಮೂರು ಮತದವರು ಲೆಕ್ಕಿಸದೆ ಅವರಿಗೆ ಅನುಕೂಲವಾದ ಉಪ ಗ್ರಂಥಗಳನ್ನು ಬರೆದುಕೊಂಡು ಅವುಗಳ ಪ್ರಕಾರ ನಡೆಯುತ್ತಿದ್ದಾರೆ. ಯಾರಾದರೂ ಜ್ಞಾನವನ್ನು ಕುರಿತು ಪ್ರಶ್ನಿಸಿದರೆ ದೈವಗ್ರಂಥದಲ್ಲಿನ ಉತ್ತರವನ್ನು ಹೇಳದೆ, ತಮ್ಮ ಉಪಗ್ರಂಥಗಳಲ್ಲಿ ಉತ್ತರಗಳನ್ನು ಹೇಳುತ್ತಿದ್ದಾರೆ. ದೈವಗ್ರಂಥಗಳನ್ನು ಸಾಕ್ಷಾತ್ತು ದೇವರೇ ಅವತರಿಸುವಂತೆ ಮಾಡಿದಾಗ, ಪ್ರತಿ ಮತದಲ್ಲಿನ ಉಪಗ್ರಂಥಗಳನ್ನು ಮನುಷ್ಯರು ಅವತರಿಸುವಂತೆ ಮಾಡಿದ್ದಾರೆ. ಮನುಷ್ಯರು ದೇವರ ಹೆಸರು ಹೇಳಿ ತಮ್ಮ ಬರಹಗಳನ್ನು ದೈವಜ್ಞಾನವಾಗಿ ತೋರಿಸುತ್ತಾ ಎಷ್ಟೋ ಜನರನ್ನು ತಪ್ಪುದಾರಿಯಲ್ಲಿ ಕಳಿಹಿಸುತ್ತಿದ್ದಾರೆ.

ಇಂತಹ ಪರಿಸ್ಥಿತಿ ಎಲ್ಲ ಮತಗಳಲ್ಲಿಯೂ ಇರುವುದರಿಂದ ಈದಿನ ನಾನು ಹೇಳುವ ದೈವಗ್ರಂಥಗಳ ಮಾತನ್ನು ಯಾರೂ ಲೆಕ್ಕಿಸುವುದಿಲ್ಲ. ನಾಳೆ ದೇವರು ಬಂದರೂ ಆತನ ಮಾತನ್ನು ಕೇಳುತ್ತಾರೆನ್ನುವ ನಂಬಿಕೆ ಕೂಡಾ ಇಲ್ಲ. ಆದರೇ ದೇವರು ಮನುಷ್ಯರಿಗೆ ತಕ್ಕ ಪ್ರಣಾಳಿಕೆಯನ್ನು ಸಿದ್ಧ ಮಾಡಿಕೊಂಡು ಬರುತ್ತಾನೆ. ನಮ್ಮ ಹತ್ತಿರ ಯಾವ ಪ್ರಣಾಳಿಕೆ ಇರುವುದಿಲ್ಲ. ಆದ್ದರಿಂದ ನಾವು ಆತನು ಆಡಿಸಿದಂತೆ ಆಡುವವರೇ. ನಾನು ಹುಟ್ಟಿದರೂ ನಾಳೆ ದೇವರು ಭಗವಂತನಾಗಿ ಹುಟ್ಟಿದರೂ ಯಾವುದೋ ಒಂದು ಮತಕ್ಕೆ ಸಂಬಂಧಿಸಿದ ತಾಯಿ ತಂದೆಯರಿಗೆ ಹುಟ್ಟಬೇಕಾಗಿರುತ್ತದೆ. ಹಾಗೆ ಹುಟ್ಟಿದವನನ್ನು ಆ ಮತಸ್ಥನೆಂದು ಮುದ್ರೆ ಹಾಕುವುದು ನಡೆಯುತ್ತಿದೆ. ಪ್ರಸ್ತುತ ನಾನು ಹಿಂದೂ ಮತಕ್ಕೆ ಸಂಬಂಧಿಸಿದ ತಾಯಿತಂದೆಯರಿಗೆ ಹುಟ್ಟಿದ್ದೇನೆ, ಆದ್ದರಿಂದ ನನ್ನನ್ನು ಎಲ್ಲರೂ ಹಿಂದೂಮತಸ್ಥನೆಂದು ಕರೆಯುತ್ತಿರುತ್ತಾರೆ. ಆದರೇ ನನಗೆ ಯುಕ್ತ ವಯಸ್ಸು ಬರುವವರೆಗು ಯಾವ ಮತ ಜ್ಞಾನ ತಿಳಿದಿಲ್ಲ. ಹಿಂದು ಮತ

ಜ್ಞಾನವು ಸಹ ತಿಳಿದಿಲ್ಲ. ಹಿಂದೂಗಳೆಲ್ಲರೂ ತಮ್ಮ ಮತ ಜ್ಞಾನ ಸಹ ತಿಳಿಯದಂತೆ ಬದುಕುತ್ತಿರುವರು. ನಾನು ಸಹ ಹಾಗೇ ಬದುಕಿದ್ದೇನೆ. ಆದರೇ ಗತ ಜನ್ಮ ಸಂಸ್ಕಾರ ಬಲದಿಂದ ಒಂದುಬಾರಿ ಭಗವದ್ಗೀತೆಯನ್ನು ಓದಿದ್ದೇನೆ ಆಗ ಭಗವದ್ಗೀತೆ ಚೆನ್ನಾಗಿ ಅರ್ಥವಾಗಿದೆ. ಎಲ್ಲರಿಗೂ ಅರ್ಥವಾದಂತೆ ಅಲ್ಲದೆ ಪ್ರತ್ಯೇಕವಾಗಿ ಅರ್ಥವಾಗಿದೆ. ಹಾಗೆ ಅರ್ಥವಾಗುವುದರಿಂದ ಭಗವದ್ಗೀತೆ ಇಂದಿನ ಹಿಂದೂಗಳೆಲ್ಲರಿಗೂ ವಿರುದ್ಧವಾಗಿರುವಂತೆ ಅರ್ಥವಾಗಿದೆ. ಭಗವದ್ಗೀತೆ ಪ್ರಕಾರ ಹಿಂದೂ ಮತದಲ್ಲಿ ಸ್ವಾಮಿಗಳು ಸಹಿತ ಇಲ್ಲವೆನ್ನುವಂತೆ ಕಾಣಿಸಿದೆ. ಭಗವದ್ಗೀತೆ ನನಗರ್ಥವಾದಂತೆ ಇತರರಿಗೆ ಏಕೆ ಅರ್ಥವಾಗಲಿಲ್ಲವೆಂದು ಪ್ರಶ್ನೆಯಾಗಿ ಉಳಿದುಹೋಗಿದೆ. ನಂತರ ಬಹಳ ಜನ ಬರೆದ ಭಗವದ್ಗೀತೆಗಳನ್ನು ಓದಿದ ನಂತರ ಭಗವದ್ಗೀತೆಯನ್ನು ಬರೆದವರಿಗೂ ಸಹ ಅದು ಸರಿಯಾಗಿ ಅರ್ಥ ವಾಗಲಿಲ್ಲವೆಂದು ಅರ್ಥವಾಗಿದೆ. ಏಕೆ ಹೀಗೆ ನಡೆದಿದೆಯೆಂದು ಸ್ವಲ್ಪ ಕಾಲ ಯೋಚನೆ ಮಾಡಿದರೂ ಏನೂ ಅರ್ಥವಾಗಲಿಲ್ಲ.

ಭಗವದ್ಗೀತೆ ನನಗೆ ಎಲ್ಲರಿಗಿಂತ ಪ್ರತ್ಯೇಕವಾಗಿ ಅರ್ಥವಾಗಿದೆಯೆಂದು ತಿಳಿದ ನಂತರ ಉಳಿದ ಬೈಬಲ್ ಗ್ರಂಥವನ್ನು ಓದುವುದಾಗಿದೆ. ಅದರಲ್ಲಿ ನಾಲ್ಕು ಸುವಾರ್ತೆಗಳ ಜ್ಞಾನ ಪ್ರತ್ಯೇಕವಾಗಿ ಕಾಣಿಸಿತು. ನಾಲ್ಕು ಸುವಾರ್ತೆ ಗಳಲ್ಲಿಯೂ ಯೇಸು ಜೀವನ, ಆತನು ಹೇಳಿದ ಮಾತುಗಳು ಇವೆ. ಯೇಸು ಹೇಳಿದ ಮಾತುಗಳು ಭಗವದ್ಗೀತೆಯಲ್ಲಿ ನನಗೆ ಅರ್ಥವಾದ ವಿಧಾನ ಎರಡು ಒಂದೇಯೆದು ತಿಳಿಯಿತು. ಯೇಸು ಹೇಳಿದ ಭಾವನೆಗಳು ಕ್ರೈಸ್ತರಿಗೆ ಕೂಡಾ ಗ್ರಹಿಸುವುದಕ್ಕೆ ಬರಲಿಲ್ಲವೆಂದು, ನಾಲ್ಕು ಸುವಾರ್ತೆಗಳಲ್ಲಿ ಯೇಸು ಹೇಳಿರುವುದಕ್ಕೂ ಕ್ರೈಸ್ತರು ಅರ್ಥ ಮಾಡಿಕೊಂಡಿರುವುದಕ್ಕೂ ಎಷ್ಟೋ ವ್ಯತ್ಯಾಸ ಇರುವಂತೆ ತಿಳಿಯಿತು. ಆಗಲೇ ಬೈಬಲ್‌ನಲ್ಲಿನ ಯೇಸು ಮಾತುಗಳು ಕ್ರೈಸ್ತರಿಗೆ ಇಲ್ಲಿಯವರೆಗು ತಿಳಿಯಲಿಲ್ಲವೆಂದು ಹೇಳಿದ್ದೇವೆ. ಭಗವದ್ಗೀತೆ ಹಿಂದೂಗಳಿಗೆ ತಿಳಿಯದಂತೆ, ಸುವಾರ್ತೆಗಳ ಜ್ಞಾನ ಕ್ರೈಸ್ತರಿಗು ಕೂಡಾ ತಿಳಿಯದಂತೆ ಹೋಗುವುದು ನನಗೆ ಆಶ್ಚರ್ಯವನ್ನುಂಟುಮಾಡಿತು. ನಂತರ ಕೂಡಲೇ ಅಂತಿಮ

ದೈವಗ್ರಂಥ ಖುರಾನ್‌ನನ್ನು ಓದಿದ್ದೇನೆ. ತೆಲುಗುದಲ್ಲಿ ಬರೆದ ಖುರಾನ್‌ನನ್ನು ಓದಿದ ನಂತರ ಖುರಾನ್ ಅತ್ಯಂತ ರಹಸ್ಯ ಜ್ಞಾನವನ್ನು ಹೇಳಿದಂತೆ ಅರ್ಥವಾಯಿತು. ಖುರಾನ್ ಗ್ರಂಥದಲ್ಲಿನ ವಾಕ್ಯಗಳು ಬಹಳ ಮಟ್ಟಿಗೆ ಸೂಕ್ಷ್ಮಜ್ಞಾನದಿಂದ ತುಂಬಿಕೊಂಡಿದ್ದು ದೊಡ್ಡ ರಹಸ್ಯಗಳನ್ನು ಅರ್ಥವಾಗುವಂತೆ ಮಾಡಿವೆ. ಖುರಾನ್‌ನಲ್ಲಿ ಅತಿ ರಹಸ್ಯವಾಗಿ ಹೇಳಿದ ಜ್ಞಾನವೆಲ್ಲವೂ ಭಗವದ್ಗೀತೆ ಯಲ್ಲಿ ಇರುವುದು, ಭಗವದ್ಗೀತೆಯಲ್ಲಿನ ಜ್ಞಾನವೇ ಯೇಸು ಮಾತುಗಳಲ್ಲಿ ಇರುವುದು ನೋಡಿದರೇ ಮೂರು ದೈವ ಗ್ರಂಥಗಳಲ್ಲಿ ಒಂದೇ ದೇವರ ಜ್ಞಾನವಿದೆಯೆಂದು ತಿಳಿಯಿತು. ನನಗೆ ಅರ್ಥವಾದಂತೆ ಮೂರು ಗ್ರಂಥಗಳು ಮೂರು ಮತದವರಿಗೆ ಅರ್ಥವಾಗದೆ ಹೋಗುವುದು, ಅವರು ಬೇರೆ ಭಾವನೆಗಳೊಂದಿಗೆ ಅವುಗಳನ್ನು ಹೇಳಿಕೊಳ್ಳುವುದು ಪೂರ್ತಿ ಅಜ್ಞಾನವಾಗಿ ಕಾಣಿಸಿತು. ಸಾಧಾರಣ ಮನುಷ್ಯರಿಗೆ ಅಲ್ಲದೆ ಮತ ಬೋಧಕರಿಗು, ಗುರುಗಳಿಗು ಮೂರುಗ್ರಂಥಗಳು ಅರ್ಥವಾಗದಂತೆ ಹೋಗಿ, ಬೇರೆ ಭಾವನೆಯಲ್ಲಿ ಅರ್ಥವಾಗುವುದು ನೋಡಿದರೇ, ದೇವರೇ ಅವರ ಶ್ರದ್ಧೆಯನ್ನನುಸರಿಸಿ ಅವರಿಗೆ ಅರ್ಥವಾಗದಂತೆ ಮಾಡಿ ಅಪಮಾರ್ಗವನ್ನು ಹಿಡಿಸಿದ್ದಾನೆಂದು ಅರ್ಥವಾಯಿತು. ಅದೇ ಮಾತನ್ನೇ ಖುರಾನ್ ಗ್ರಂಥದಲ್ಲಿ ಅಲ್ಲಾಹ್ ಕೂಡಾ ಹೇಳಿದ್ದಾನೆ.

ಮೂರು ಮತಗಳ ಗ್ರಂಥಗಳಲ್ಲಿ ಏಕೈಕ ದೇವರು, ಏಕೈಕ ಜ್ಞಾನ ಇರುವಾಗ ಮೂರು ಮತಗಳು ಮೂರು ಮಾರ್ಗಗಾಳಗಿ ಹೋಗುತ್ತಾ ನಮ್ಮ ಮತ ಬೇರೆ, ನಿಮ್ಮ ಮತ ಬೇರೆಯೆಂದು, ನಮ್ಮ ದೇವರು ಬೇರೆ, ನಿಮ್ಮ ದೇವರು ಬೇರೆಯೆಂದು ಏಕೆ ಅನ್ನುತ್ತಿದ್ದಾರೆಂದು ಪ್ರಶ್ನಿಸಿಕೊಂಡು ನೋಡಿದರೆ ಗ್ರಂಥದಲ್ಲಿನ ಜ್ಞಾನ ಅವರಿಗೆ ಅರ್ಥವಾಗಲಿಲ್ಲವೆಂದು ತಿಳಿಯಿತು. ಯಾರ ಶ್ರದ್ಧೆಯನ್ನನುಸರಿಸಿ, ಯಾರ ಭಾವನೆಯನ್ನನುಸರಿಸಿ ಅವರಿಗೆ ಗ್ರಂಥದಲ್ಲಿನ ಜ್ಞಾನ ಅರ್ಥವಾಗಿರುವುದರಿಂದ ಮೂರು ಬೇರೆಬೇರೆ ಮತಗಳಾಗಿ, ಮೂರು ಬೇರೆಬೇರೆ ಜ್ಞಾನಗಳಾಗಿ ಅವರಿಗೆ ತಿಳಿದಂತೆ, ಆದ್ದರಿಂದಲೇ ಅವರು ಒಂದೊಂದು ಮತದವರು ಒಂದೊಂದು ದೇವರನ್ನು ಕುರಿತು ಹೇಳುತ್ತಿದ್ದಾರೆಂದು ನನಗೆ

ತಿಳಿಯಿತು. ನನಗೆ ಅವರೆಲ್ಲರಿಗಿಂತ ಪ್ರತ್ಯೇಕವಾಗಿ ತಿಳಿದಿರುವುದಕ್ಕೆ ನಾನೇನು ಮಾಡಬೇಕೆನ್ನುವ ಪ್ರಶ್ನೆ ಬಂದಿತು. ಆಗ ದೇವರ ಜ್ಞಾನದಲ್ಲಿ ಇರುವ ಸತ್ಯವನ್ನು ತಿಳಿಸಬೇಕೆನ್ನುವ ಸಂಕಲ್ಪ ನನ್ನಲ್ಲಿ ದೇವರು ಹುಟ್ಟುವಂತೆ ಮಾಡಿದ್ದಾನೆ. ದೇವರ ಆಜ್ಞೆ ಮೇರೆಗೆ ನನಗೆ ತಿಳಿದಷ್ಟುಮಟ್ಟಿಗೆ ದೇವರ ಜ್ಞಾನವನ್ನು ಇತರ ಮತದವರಿಗೂ, ಸ್ವಮತದವರಿಗೂ ತಿಳಿಸಬೇಕೆಂದುಕೊಂಡಿದ್ದೇನೆ. ಆ ಪ್ರಯತ್ನದಲ್ಲಿ ಭಾಗವಾಗಿ ಇಂದಿಗೂ ಮತಭೇದ ಇಲ್ಲದಂತೆ ಮೂರು ಗ್ರಂಥಗಳ ವಾಕ್ಯಗಳನ್ನು ಸೇರಿಸಿ ಹೇಳುತ್ತಾ ಸುಮಾರು 80 ಗ್ರಂಥಗಳನ್ನು ಬರೆಯುವುದು ನಡೆದಿದೆ. ಭವಿಷ್ಯತ್ತಿನಲ್ಲಿ ನೂರು ಗ್ರಂಥಗಳನ್ನು ಬರೆಯಬೇಕೆನ್ನುವುದು ದೇವರ ಸಂಕಲ್ಪ.

ದೇವರ ಸಂಕಲ್ಪ ನೆರವೇರುವಂತೆ ನಾನು ನಡೆದುಕೊಳ್ಳುವುದು ನನ್ನ ಆತ್ಮ ನಡೆಸುವುದು ನಡೆಯುತ್ತಿದೆ. ಅದರ ಮೂಲವಾಗಿ ಮೂರು ಮತದವರಿಗೂ ಅವರವರ ಗ್ರಂಥಗಳಲ್ಲಿನ ಜ್ಞಾನವನ್ನೇ ವಿವರಿಸಿ ಹೇಳುತ್ತಿದ್ದೇವೆ. ಹಾಗೆ ಹೇಳುವುದರಿಂದ ನನ್ನ ಭಾವನೆಗಳು ಅವರಿಗೆ ತಿಳಿಯುವುದರಿಂದ ಇಲ್ಲಿಯವರೆಗು ತಿಳಿಯದ ಜ್ಞಾನ ಅವರಿಗೆ ತಿಳಿದಂತಾಗಿದೆ. ಅದಕ್ಕೆ ಮೂರು ಮತದವರು ನನ್ನ ಹತ್ತಿರ ಸಂತೋಷವನ್ನು, ಸಂತೃಪ್ತಿಯನ್ನು ವ್ಯಕ್ತ ಮಾಡುತ್ತಿದ್ದಾರೆ. ಅವರ ಸಂತೋಷವನ್ನು ನೋಡಿ ಅವರ ಹಿರಿಯರು ಹೇಳದ ರಹಸ್ಯಗಳನ್ನು ದೇವರು ನನ್ನಿಂದ ಹೇಳಿಸಿರುವುದಕ್ಕೆ ನನಗೆ ಸಂತೋಷವಾಗುವುದೇ ಅಲ್ಲದೆ ಹೆಚ್ಚಿನ ಉತ್ಸಾಹ ಹೊಂದಿ ಇನ್ನೂ ಎಷ್ಟೋ ವಿಷಯಗಳನ್ನು ತಿಳಿಸುವುದಕ್ಕೆ ಕಾರಣವಾಗಿದೆ. ಕಾಲ ಕಳೆಯುತ್ತಿದ್ದಂತೆ ಜ್ಞಾನದಲ್ಲಿ ಯಾರಿಗೂ ತಿಳಿಯದ ರಹಸ್ಯಗಳು ನನ್ನಿಂದ ಆತ್ಮ ಹೊರಗಿಡುವುದು ಇತರರಿಗೆ ಜ್ಞಾನ ತಿಳಿಯುವುದೇ ಅಲ್ಲದೆ ನನಗೆ ಕೂಡಾ ಎಷ್ಟೋ ಹೊಸ ಜ್ಞಾನ ತಿಳಿದಂತಾಗಿದೆ. ಹೀಗೆ ನಿತ್ಯವೂ ನಡೆಯಬೇಕೆಂದು ಕೋರಿಕೊಳ್ಳುತ್ತಿದ್ದೇನೆ. ಹಾಗೆಯೇ ದೇವರು ನೆರವೇರಿಸುತ್ತಿದ್ದಾನೆ.

**ಪ್ರಶ್ನೆ :– ನಿಮಗೆ ಜ್ಞಾನದಲ್ಲಿ ಎಷ್ಟು ಹೊಸ ಭಾವನೆಗಳು ತಿಳಿದರೂ ಒಂದೊಂದು ಮತ ಒಂದೊಂದು ಗೂಟಕ್ಕೆ ಕಟ್ಟಿಹಾಕಲ್ಪಟ್ಟಿವೆ. ಹಿಂದೂಗಳ ಭಗವದ್ಗೀತೆ ಪ್ರಕಾರ ಪುನರ್ಜನ್ಮಗಳಿವೆ ಎಂದು ಅನ್ನುತ್ತಿದ್ದಾರೆ. ಮುಸ್ಲಿಮ್‌ರು ಖುರಾನ್ ಪ್ರಕಾರ**

**ಪುನರ್ಜನ್ಮಗಳು ಇಲ್ಲ ಎನ್ನುತ್ತಿದ್ದಾರೆ. ಜನ್ಮಗಳಿವೆಯೆಂದು ಹೇಳುವುದು ಹಿಂದೂಗಳ ಮತಧ್ಯೇಯವಾದಾಗ, ಜನ್ಮಗಳು ಇಲ್ಲ ಎಂದು ಹೇಳುವುದು ಮುಸ್ಲಿಮ್‌ರ ಮತ ನಿರ್ಣಯವಾಗಿ ಇದೆ. ಆನ್ಮಗಳಿವೆ, ಜನ್ಮಗಳಿಲ್ಲ ಎನ್ನುವ ಎರಡು ವಿಷಯಗಳ ಮಧ್ಯೆ ದೊಡ್ಡ ಅಗಾಧವಿದ್ದಂತೆ ಇದೆ. ಜನ್ಮಗಳು ಇಲ್ಲ ಎನ್ನುವ ವಿಷಯ ಮುಸ್ಲಿಮ್‌ರಲ್ಲಿ ಹುಟ್ಟಿನಿಂದಲೇ ಅರೆದು ಒಯ್ದ ಔಷಧದಂತೆ ಇದೆ. ಹಾಗಿರುವಾಗ ನೀವು ಏನು ಹೇಳಿದರೂ ಜನ್ಮಗಳಿವೆಯೆಂದು ಹೇಳಿದರೂ ಮುಸ್ಲಿಮ್‌ರೆಲ್ಲರೂ ನಿನ್ನನ್ನು ವಿಭೇಧಿಸಿ ಮುಕ್ತಕಂಠದಿಂದ ಜನ್ಮಗಳು ಇಲ್ಲವೆಂದೇ ಹೇಳುತ್ತಾರೆ. ನೀವು ಉಳಿದ ಮತಸ್ಥರಿಗೆ ಏನು ಹೇಳಿದ್ದೀರೋ, ಅವರು ಏನು ಕೇಳಿದ್ದಾರೋ ನಮಗೆ ತಿಳಿದಿಲ್ಲ ಆದರೇ, ನೀವು ಮುಸ್ಲೀಮ್‌ರಿಂದ ಜನ್ಮಗಳಿವೆಯೆಂದು ಒಪ್ಪಿಸುತ್ತೀರಾ? ಅವರು ಒಪ್ಪಿಕೊಳ್ಳುತ್ತಾರಾ? ಹೇಳಿರಿ.**

**ಉತ್ತರ :–** ಒಪ್ಪಿಸುವುದಕ್ಕೆ ನಾನ್ಯಾರು, ಅವರ ಧೃಢವಾದ ಭಾವನೆಯನ್ನು ಅವರಿಂದ ತೆಗೆದುಹಾಕುವುದಕ್ಕೆ ನಾನು ಕೈಲಾಗದವನೇ ಆದರೇ, ಎಲ್ಲರಲ್ಲಿರುವ ಆತ್ಮ ಅಂದುಕೊಂಡರೇ ಏನಾದರೂ ಮಾಡಬಲ್ಲದು. ಒಂದು ದಿನ ಒಬ್ಬ ಮುಸ್ಲಿಮ್ ಪಂಡಿತನು ನನ್ನೊಂದಿಗೆ ಭೇಟಿಯಾಗುವುದು ನಡೆದಿದೆ. ಆತನ ಹೆಸರೇ ರಬ್ಬಾನಿ ಎಂದುಇದೆ. ರಬ್ಬಾನಿ ಎಂದರೇ ಜ್ಞಾನದಲ್ಲಿ ಪಂಡಿತನೆಂದು ಅರ್ಥ. ಅವರನ್ನು ಪುನರ್ಜನ್ಮ ವಿಷಯವಾಗಿ ನಾನು ಕೇಳುವುದು ಆತನು ಉತ್ತರ ಹೇಳುವುದು ನಡೆದಿದೆ. ಆ ಸಂಭಾಷಣೆ ಕೆಳಗಿನ ರೀತಿಯಾಗಿ ಇದೆ ನೋಡಿರಿ.

**ನಾನು :–** ರಬ್ಬಾನೀರವರೆ! ನೀವು ಇಸ್ಲಾಮ್ ಜ್ಞಾನದಲ್ಲಿ ಪಂಡಿತರೆಂದು ಕೇಳಿದ್ದೇವೆ. ನನಗೆ ಅಂತಿಮ ದೈವಗ್ರಂಥದಲ್ಲಿ ಪುನರ್ಜನ್ಮಗಳ ವಿಷಯವಾಗಿ ಸಂಶಯವಿದೆ. ನಿಮ್ಮ ಅನುಭವ ಜ್ಞಾನದರೀತ್ಯಾ ಖುರಾನ್ ಗ್ರಂಥ ಪುನರ್ಜನ್ಮಗಳನ್ನು ಸಮರ್ಥಿಸುತ್ತಿದೆಯಾ? ಪುನರ್ಜನ್ಮಗಳನ್ನು ಇಲ್ಲವೆಂದು ಖಂಡಿಸುತ್ತಿದೆಯಾ?

**ಆತನು :–** ನನ್ನ ಅನುಭವ ಜ್ಞಾನವೇ ಅಲ್ಲ, ಮುಸ್ಲಿಮ್ ಜ್ಞಾನದಲ್ಲಿ ಎಲ್ಲೂ

ಪುನರ್ಜನ್ಮಗಳಿರುವಂತೆ ಇಲ್ಲ. ಒಬ್ಬ ಮನುಷ್ಯ ಬದುಕಿದಷ್ಟು ಕಾಲ ಬದುಕಿ ಸತ್ತುಹೋದ ನಂತರ ಒಂದು ದಿನ ಆತನ ಪಾಪಪುಣ್ಯಗಳ ಪಟ್ಟಿಯನ್ನು ಅಲ್ಲಾಹ್ ನೋಡಿ ಆತನು ಮಾಡಿಕೊಂಡಿರುವುದನ್ನನುಸರಿಸಿ ಅವನನ್ನು ನರಕಕ್ಕೆ ಕಳುಹಿಸಬೇಕಾ? ಅಥವಾ ಸ್ವರ್ಗಕ್ಕೆ ಕಳುಹಿಸಬೇಕಾ? ಎಂದು ನಿರ್ಣಯಿಸಿ, ಅವನನ್ನು ಸ್ವರ್ಗಕ್ಕೋ ನರಕಕ್ಕೋ ಕಳುಹಿಸುವುದು ನಡೆಯುತ್ತಿರುತ್ತದೆ. ಹಾಗೆ ಸ್ವರ್ಗ ನರಕಗಳಿಗೆ ಕಳುಹಿಸುವುದು ಹೊರತು ಪುನಃ ಜನ್ಮಗಳಿಗೆ ಕಳುಹಿಸುವುದು ನಮ್ಮ ಖುರಾನ್ ಗ್ರಂಥದಲ್ಲಿ ಇಲ್ಲ.

**ನಾನು :-** ಖುರಾನ್ ಗ್ರಂಥವನ್ನು ನಾವು ಎರಡು ಬಾರಿ ಓದಿದ್ದೇನೆ. ಅದರಲ್ಲಿ ಕೆಲವು ದೈವ ವಾಕ್ಯಗಳಾದ ಆಯತ್‌ಗಳನ್ನು ನೋಡಿದಾಗ ಪುನರ್ಜನ್ಮಗಳಿರುವಂತೆ ಅರ್ಥವಾಗಿದೆ. ಅವು ಹೀಗೆ ಇವೆ. (ಸೂರಾ 53, ಆಯತ್ 44, 45, 46, 47) **(44) "ನಿಶ್ಚಯವಾಗಿ ಆತನೇ ಮರಣಿಸುವಂತೆ ಮಾಡುವವನು, ಪುನಃ ಜೀವನವನ್ನು ಪ್ರಸಾದಿಸುವವನು. (45) ನಿಶ್ಚಯವಾಗಿ ಹೆಣ್ಣು ಗಂಡು ಜೋಡಿಗಳನ್ನು ಸೃಷ್ಠಿಸಿದವನು ಆತನೇ. (46) ಪ್ರವಹಿಸುವಂತೆ ಮಾಡಿದ(ವಿಸರ್ಜಿಸಲ್ಪಟ್ಟ)ವೀರ್ಯ ಬಿಂದುವಿನಿಂದ (47) ಮತ್ತೊಂದು ಜೀವನವನ್ನು ಪ್ರಸಾದಿಸುವುದು ಆತನಿಗೇ ಸಲ್ಲುತ್ತದೆ"** ಎಂದು ಇದೆ. ಅಷ್ಟೇ ಅಲ್ಲದೆ **(ಸೂರಾ7, ಆಯತ್ 29) "ಮೊದಲಬಾರಿ ನಿಮ್ಮನ್ನು ಅಲ್ಲಾಹ್ ಹೇಗೆ ಹುಟ್ಟಿಸಿದ್ದಾನೋ ಎರಡನೆಬಾರಿ ಕೂಡಾ ನೀವು ಹಾಗೆಯೇ ಹುಟ್ಟಿಸಲ್ಪಡುತ್ತೀರ"** ಎಂದು ಇದೆ. ಇದರ ಅರ್ಥ ಮೊದಲ ಜನ್ಮದಹಾಗೆ ಎರಡನೆ ಜನ್ಮ ಇದೆಯೆಂದೇ ಅಲ್ಲವೆ ಅರ್ಥ. ವೀರ್ಯ ಬಿಂದುವಿನೊಂದಿಗೆ ಹುಟ್ಟುವುದು ಜನ್ಮವೇ ಅಲ್ಲವೆ! ಮತ್ತೊಂದು ಕಡೆ **(ಸೂರಾ 36-68) " ನಾವು ವೃದ್ಧಾಪ್ಯಕ್ಕೆ ಸೇರಿದವರನ್ನು ಮತ್ತೆ ಜನನ ಸ್ಥಿತಿಗೆ ತೆಗೆದುಕೊಂಡು ಹೋಗುತ್ತೇವೆ. ಆದರೂ ಅವರು ಅರ್ಥ ಮಾಡಿಕೊಳ್ಳುವುದಿಲ್ಲವೇನು?"** ಇಲ್ಲಿಯಾದರೂ ಅವರು ಅರ್ಥಮಾಡಿಕೊಳ್ಳುವುದಿಲ್ಲವೇನು? ಎಂದು ಮುಸ್ಲೀಮ್‌ರನ್ನು ಉದ್ದೇಶಿಸಿ ಅಲ್ಲಾಹ್ ಎಂದಂತೆ ನನಗೆ ಅರ್ಥವಾಗಿದೆ. ಮುದುಕರನ್ನು

ಪುನಃ ಮಕ್ಕಳಾಗಿ ಹುಟ್ಟಿಸುವವನು ದೇವರೇಯೆಂದು ಮೇಲಿನ ಆಯತ್‌ನಲ್ಲಿ ತಿಳಿಯುತ್ತಿದೆ. ಮತ್ತೊಂದು ಕಡೆ **(ಸೂರಾ40, ಆಯತ್11) "ನಮ್ಮ ಪ್ರಭೂ! ನೀನು ನಮಗೆ ಎರಡುಬಾರಿ ಸಾವನ್ನುಕೊಟ್ಟಿದ್ದೀಯ, ಎರಡು ಸಲ ಬದುಕನ್ನುಕೊಟ್ಟಿದ್ದೀಯ. ಈಗ ನಾವು ನಮ್ಮ ಪಾಪಗಳನ್ನು ಒಪ್ಪಿಕೊಳ್ಳುತ್ತಿದ್ದೇವೆ. ಮತ್ತು ಈಗ ನಾವು ಹೊರಬೀಳುವ ಮಾರ್ಗ ಯಾವುದಾದರೂ ಇದೆಯಾ ಎಂದು ಕೇಳಿಕೊಳ್ಳುತ್ತಿದ್ದೇವೆ"** ಎಂದು ಇದೆ. ಇವೆಲ್ಲವೂ ನೋಡಿದ ನಂತರ ನಮಗೆ ಖುರಾನ್ ಗ್ರಂಥ ಜನ್ಮಗಳಿರುವಂತೆ ತಿಳಿಸಿದೆಯೆಂದು ಅಂದುಕೊಳ್ಳುತ್ತಿದ್ದೇವೆ, ನೀವೇನೆನ್ನುತ್ತೀರ?

**ಆತನು :–** ಎಲ್ಲೋ ಯಾವುದೋ ಒಂದು ಎರಡು ಆಯತ್‌ಗಳನ್ನು ತೆಗೆದು ಕೊಂಡು ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾರದೆ ಜನ್ಮಗಳಿವೆಯೆನ್ನುವುದು ಒಪ್ಪಿಕೊಳ್ಳುವಂತಹ ವಿಷಯವಲ್ಲ. ನೀವು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ.

**ನಾನು :–** "ಅಂತಿಮ ದೈವ ಗ್ರಂಥ ಖುರಾನ್" ಎನ್ನುವ ತೆಲುಗು ಗ್ರಂಥದಲ್ಲಿ (ಆಹ್‌ಸನುಲ್ ಬಯಾನ್) ಎನ್ನುವ ಗ್ರಂಥದಲ್ಲಿ **53ನೇ ಸೂರಾ, 46ನೇ ಆಯತ್‌ನಲ್ಲಿ (53–46) "ಗರ್ಭದಲ್ಲಿ ಸೋರಿಸಲ್ಪಟ್ಟ ವೀರ್ಯ ಬಿಂದುವಿನೊಂದಿಗೆ (47) "ಪುನಃ ಜೀವಂತಗೊಳಿಸುವ ಹೊಣೆಯೂ ಕೂಡ ಆತನದ್ದೇ"** ಎಂದು ಇದೆ. ಸ್ವಚ್ಛವಾಗಿ ವೀರ್ಯಬಿಂದುವಿನಿಂದ ಎಂದು ಬರೆದರೂ ಅರ್ಥ ವಾಗದಿರುವುದು ಏನಿದೆ? 'ವೀರ್ಯಬಿಂದುವಿನೊಂದಿಗೆ' ಎನ್ನುವ ಮಾತು ಎಲ್ಲ ತೆಲುಗು ಖುರಾನ್ ಗ್ರಂಥಗಳಲ್ಲಿ ಇದೆ. ವೀರ್ಯಬಿಂದುವಿನೊಂದಿಗೆ ಹುಟ್ಟುವುದು ಶಿಶು ಜನ್ಮ ಹೊರತು ಏನೂ ಇಲ್ಲವೆಂದು ತಿಳಿಯುತ್ತಿದೆ. ಹಾಗಿರುವಾಗ ಸರಿಯಾಗಿ ಅರ್ಥವಾಗಲಿಲ್ಲವೆಂದು ಹೇಳುವುದು ಪೂರ್ತಿ ತಪ್ಪಾಗುತ್ತದೆ. ಒಂದು ಆಯತ್‌ಗೆ ತಪ್ಪು ಭಾವನೆಯನ್ನು ಹೇಳಿದರೇ ದೇವರಿಗೆ ಕೋಪ ಬರುತ್ತದೆಂದು ಹೇಳಿದ್ದಾನೆ. ಒಂದು ವಿಷಯವನ್ನು ಗ್ರಂಥದಲ್ಲಿ ಸ್ಪಷ್ಟಗೊಳಿಸಿದ ನಂತರ ಅದನ್ನು ಬಚ್ಚಿಡುವ ಧೋರಣೆ ಅವಲಂಭಿಸಿದವರನ್ನು

ದೇವರು ಶಪಿಸುತ್ತಾನೆಂದು ಸೂರಾ2, ಆಯತ್ 159ರಲ್ಲಿ ನೀವು ನೋಡಲಿಲ್ಲವಾ? ದೇವರು ಸ್ಪಷ್ಟವಾಗಿ ಎಷ್ಟೋ ಆಯತ್‌ಗಳನ್ನು ಹೇಳಿದರೇ ಮನುಷ್ಯರು ಸ್ವಾರ್ಥದಿಂದ ಅವುಗಳನ್ನು ಮುಚ್ಚಿಡಬೇಕೆಂದು ನೋಡುವುದು ಒಳ್ಳೆಯದಾ?

**ಆತನು :–** ಎಲ್ಲಾದರೂ ಒಂದು ಕಡೆ ಜನ್ಮಗಳಿವೆಯೆಂದು ಖುರಾನ್ ಗ್ರಂಥದಲ್ಲಿದ್ದರೂ ಅದನ್ನು ಒಂದನ್ನು ಹಿಡಿದುಕೊಂಡು ನಮ್ಮ ಸಮಾಜ ಮೊದಲಿನಿಂದ ವಿಶ್ವಾಸಿಸುತ್ತಿರುವುದನ್ನು ಬಿಟ್ಟುಕೊಳ್ಳಲಾರೆವು. ನಮ್ಮ ಹಿರಿಯರೆಲ್ಲರೂ ಮುಸ್ಲಿಮ್ ಸಮಾಜಕ್ಕೆ ಪುನರ್ಜನ್ಮಗಳು ಇಲ್ಲವೆಂದು ಹೇಳಿದ್ದಾರೆ. ಅದೇ ನಿಜ. ಎರಡನೆ ಜನ್ಮ ಎಂದರೇ ದೇವರು ಅಂತಿಮ ದಿನದಂದು ಸಮಾಧಿಯಿಂದ ಎಬ್ಬಿಸಿದಾಗಲೇ ಮರುಜನ್ಮವಾಗುತ್ತದೆ. ಎರಡನೆ ಸಲ ಜನ್ಮ ಎನ್ನುವುದಿದ್ದರೆ ಅದು ಪ್ರಳಯದಲ್ಲಿ ದೇವರು ಬದುಕಿಸಿ ಎಬ್ಬಿಸುವುದೇ ಎಂದು ಹೇಳುತ್ತಿದ್ದೇವೆ.

**ನಾನು :–** ಪ್ರಳಯ ದಿನ ಅಥವಾ ಅಂತಿಮ ದಿನವೆಂದರೇ ಮನುಷ್ಯ ಮರಣಿಸುವ ದಿನವನ್ನು ಪ್ರಳಯ ದಿನವೆಂದು, ಅಂತ್ಯ ದಿನವೆಂದು ಏಕೆ ಅಂದುಕೊಳ್ಳಬಾರದು? ಸತ್ತುಹೋದ ದಿನವೇ ಅವನ ಪಾಪಪುಣ್ಯಗಳನ್ನು ಲೆಕ್ಕಿಸಿ ಸ್ವರ್ಗ ನರಕಗಳ ನಿರ್ಣಯ ಮಾಡುತ್ತಿದ್ದಾನೆಂದು ಏಕೆ ಅಂದುಕೊಳ್ಳಬಾರದು? ಸ್ವರ್ಗ ನರಕಗಳು ಇಲ್ಲೇ ಭೂಮಿಮೇಲೆಯೇ ಅನುಭವಿಸುತ್ತಿದ್ದೇವೆಂದು ಏಕೆ ಅಂದುಕೊಳ್ಳಬಾರದು? ಪ್ರತ್ಯಕ್ಷವಾಗಿ ಸ್ವರ್ಗ ಸುಖಗಳನ್ನು ಅನುಭವಿಸುವವರನ್ನು ನೋಡುತ್ತಿದ್ದೇವೆ. ಹಾಗೆಯೇ ನರಕ ಬಾಧೆಗಳನ್ನು ಅನುಭವಿಸುವವರನ್ನು ನೋಡುತ್ತಿದ್ದೇವೆ. ಪ್ರಳಯ ಎಂದರೂ, ಅಂತ್ಯ ದಿನ ಎಂದರೂ, ಮನುಷ್ಯ ಮರಣಿಸುವ ಸಮಯವೇಯೆಂದು ಏಕೆ ಅಂದುಕೊಳ್ಳಬಾರದು? ಖುರಾನ್ ದೈವಗ್ರಂಥ. ಶಾಸ್ತ್ರಬದ್ಧವಾದ ಗ್ರಂಥ. ನೀವು ಹೇಳುವ ಮಾತುಗಳಿಗೆ ಶಾಸ್ತ್ರಾಧಾರವಿಲ್ಲ. ಕುರುಡರಂತೆ ನಂಬಬೇಕಾಗಿದ್ದೆ. ಪುನರ್ಜನ್ಮಗಳ ವಿಷಯ ಅರ್ಥವಾಗಬೇಕೆಂದರೆ ಸೂರಾ ಆರು (6) ಆಯತ್ 95ರಲ್ಲಿ ಬರೆದ ವಿಷಯ ಅರ್ಥವಾದರೇ ಪುನರ್ಜನ್ಮಗಳಿವೆಯೆನ್ನುವ ವಿಷಯ ಅರ್ಥವಾಗುತ್ತದೆ.

ಪ್ರತಿ ವಿಷಯ ದೇವರ ಸೃಷ್ಠಿಯಲ್ಲಿ ಹೇತುಬದ್ಧವಾಗಿ ಇರುತ್ತದೆ. ಪ್ರತಿಯೊಂದಕ್ಕೂ ಒಂದು ಕಾರಣವಿರುತ್ತದೆ. ಮನುಷ್ಯ ಹುಟ್ಟುವಿಕೆಗು ಕಾರಣ, ಸಾವಿಗು ಕಾರಣವಿದೆ. ಈ ದಿನ ಪ್ರಪಂಚದಲ್ಲಿ ಅನೇಕ ವಿಧಗಳ ಕಷ್ಟ ಸುಖಗಳಿಗೆ ಅನೇಕ ವಿಧ ಕಾರಣಗಳಿವೆ. ಅಲ್ಲಾಹ್ ಯಾರನ್ನೂ ಅನವಶ್ಯಕವಾಗಿ ಶಿಕ್ಷಿಸುವುದಿಲ್ಲ. ಈದಿನ ಅನೇಕ ಶಿಕ್ಷೆಗಳನ್ನು ಎಂದರೆ ಬಾಧೆಗಳನ್ನು ಅನುಭವಿಸುವವರನ್ನು ದೇವರು ಕಾರಣವಿಲ್ಲದಂತೆ ಬಾಧಿಸುತ್ತಿಲ್ಲ. ದೇವರ ವಿಷಯದಲ್ಲಿ ವಿಶ್ವಾಸ ಇಲ್ಲದವನನ್ನು ಅಪಮಾರ್ಗದೊಳಗೆ ಕಳುಹಿಸುತ್ತಿದ್ದೇನೆಂದು, ಪೂರ್ತಿ ವಿಶ್ವಾಸಿಸಿದವನನ್ನು ಜ್ಞಾನಮಾರ್ಗದಲ್ಲಿ ಕಳುಹಿಸುತ್ತಿದ್ದೇನೆಂದು ಈಗ ಮನುಷ್ಯ ಇರುವುದನ್ನನುಸರಿಸಿ ಈಗಲೇ ದೇವರು ನಿರ್ಧಾರಿಸಿ ಹೇಳಿ ಅವನನ್ನು ಅಪಮಾರ್ಗದಲ್ಲೋ, ಒಳ್ಳೆಯ ಮಾರ್ಗದಲ್ಲೋ ಕಳುಹಿಸುತ್ತಿದ್ದಾನೆ. ಹಾಗಿರುವಾಗ ಪ್ರಪಂಚ ವಿಷಯದಲ್ಲಿ ತಪ್ಪು ಮಾಡಿದರೇ ಕೂಡಲೇ ಅವನಿಗೆ ಶಿಕ್ಷೆ ಹೇಳುವಂತೆ ಇರುತ್ತದೆ ಆದರೆ, ಯಾವಾಗಲೋ ಕೆಲವು ಯುಗಗಳ ನಂತರ ಎಂದು ಹೇಳುವುದು ಶಾಸ್ತ್ರಬದ್ಧವಲ್ಲ. ಈದಿನ ಮನುಷ್ಯರು ಅನುಭವಿಸುವ ಶಿಕ್ಷೆಗಳು ಮನುಷ್ಯರು ಮಾಡಿಕೊಂಡ ತಪ್ಪುಗಳಲ್ಲವೇ, ದೇವರು ವಿಧಿಸಿದ ಬಾಧೆಗಳಲ್ಲವೇ?

ಮನುಷ್ಯ ಪಾಪಗಳನ್ನು ಮಾಡಿಕೊಂಡು ಬಾಧೆಪಡುತ್ತಿದ್ದರೆ, ಅವರು ಬಾಧೆಯನ್ನು ಭರಿಸಲಾರದೆ ಅಲ್ಲಾಹ್‌ನ್ನು ಬೇಡಿಕೊಂಡರೆ ದೇವರು ಕ್ಷಮಿಸುತ್ತಾನೆ. ದೇವರು ಕ್ಷಮಾಶೀಲನು ಎನ್ನುವ ಮಾತಿಗೆ ಅರ್ಥ ಮನುಷ್ಯ ಮಾಡಿಕೊಂಡ ಪಾಪವನ್ನು ಅನುಭವಿಸದಂತೆ ಕ್ಷಮಿಸುತ್ತಾನೆಂದು ಅರ್ಥವಲ್ಲವೆ? ಮನುಷ್ಯನಿಗೆ ಕ್ಷಮಾಪಣೆ ಯಾವಾಗ ಅವಶ್ಯ ಎಂದರೇ ಬಾಧೆಗಳು ಅನುಭವಿಸುವಾಗ. ಬಾಧೆಗಳು ಯಾವಾಗ ಬರುತ್ತವೆ ಎಂದರೇ ಪಾಪಗಳ ಫಲಿತ ಮೇಲೆ ಬಿದ್ದಾಗ. ಹಾಗಲ್ಲದೆ ಮನುಷ್ಯ ಮಾಡಿಕೊಂಡ ಪಾಪ ಯಾವುದೋ ಲೋಕದಲ್ಲಿ ನರಕಲೋಕದಲ್ಲಿ ಅನುಭವಿಸುವನು ಎಂದರೇ ಆಗ ಕ್ಷಮಿಸುತ್ತೇನೆಂದು ಈತನು ಹೇಳಲಿಲ್ಲ. ಆಗ ಕ್ಷಮಾಪಣೆ ಕೇಳುತ್ತೇನೆಂದು ಅವನು ಹೇಳಲಿಲ್ಲ. ದೇವರು ಪ್ರತ್ಯಕ್ಷವಾಗಿ ಪಾಪಗಳು ಅನುಭವಿಸುತ್ತಾರೆಂದು ಹೇಳಿದ್ದರೂ, ಮರಣಿಸಿದಾಗಲೇ

ಅವನಿಗೆ ಪ್ರಳಯ, ಅದೇ ದಿನವೇ ಅವನ ಪಾಪಪುಣ್ಯಗಳಿಗೆ ಶಿಕ್ಷೆಗಳು ಖರಾರು ಮಾಡಿ ಎರಡನೆ ಜನ್ಮಕ್ಕೆ ದೇವರು ಕಳುಹಿಸುತ್ತಿದ್ದಾನೆಂದು ಏಕೆ ಅಂದುಕೊಳ್ಳ ಬಾರದು? ಪ್ರತಿ ನಿತ್ಯ ಮರಣಿಸುವವರು ಎಲ್ಲಿಗೆ ಹೋಗುತ್ತಿದ್ದಾರೆ? ಹೊಸದಾಗಿ ಶಿಶುಗಳಾಗಿ ಹುಟ್ಟುವವರೆಲ್ಲಾ ಎಲ್ಲಿಂದ ಹುಟ್ಟಿಬರುತ್ತಿದ್ದಾರೆ? ಎಂದು ಸ್ವಲ್ಪವಾದರೂ ಆಲೋಚಿಸದೆ, ದೇವರು ಗ್ರಂಥದಲ್ಲಿ ಹೇಳದ ವಿಷಯಗಳನ್ನು ದೇವರು ಹೇಳಿದ್ದಾನೆಂದು ಅಸತ್ಯವನ್ನು ದೇವರಿಗೆ ಅಂಟಗಟ್ಟುವುದನ್ನು ದೇವರು ಸಹಿಸಿಕೊಳ್ಳುತ್ತಾನಾ? ನನ್ನ ಆಯತ್‌ಗಳಿಗೆ ತಪ್ಪು ಅರ್ಥವನ್ನು ಹೇಳುವವರಿಗೆ, ನಿಜ ಭಾವನೆಗಳನ್ನು ಮುಚ್ಚಿಡುವವರಿಗೆ ದೇವರು ಶಪಿಸುತ್ತಾನೆಂದು ಹೇಳಿದ್ದಾರೆ. ಶಾಪ ಎಂದರೆ ಶಾಸ್ತ್ರಬದ್ಧವಾದುದು, ಶಾಸನಗಳೊಂದಿಗೆ ಕೂಡಿಕೊಂಡಿರುವುದು. ಪ್ರತ್ಯಕ್ಷವಾಗಿ ನಡೆಯುವುದೆಂದು ಅರ್ಥ. ದೇವರು ಅಷ್ಟೊಂದು ಭಯವಿಟ್ಟು ಹೇಳಿದರೂ, ಆತನು ಶಿಕ್ಷಿಸುವವರಲ್ಲಿ ಕ್ರೂರವಾಗಿ ನಡೆದುಕೊಳ್ಳುವವನಾದರೂ ದೇವರೆಂದರೇ ಭಯವಿಲ್ಲದಂತೆ ಆತನ ಆಯತ್‌ಗಳಿಗೆ ತಪ್ಪು ಹೇಳುವುದು ದೊಡ್ಡ ತಪ್ಪಾಗುತ್ತದೆ. ತೀರದ ಶಿಕ್ಷೆಯಾಗುತ್ತದೆ.

**ಆತನು :–** ನಾವು ಅಂದುಕೊಂಡಿರುವುದೇ ಸತ್ಯ ನೀವು ಅಂದುಕೊಂಡಿರುವುದೇ ಅಸತ್ಯವೆಂದು ನೀವು ಏಕೆ ಅಂದುಕೊಳ್ಳಬಾರದು. ನೀವೇ ತಪ್ಪಾಗಿ ದೇವರ ವಾಕ್ಯಗಳನ್ನು ಅರ್ಥ ಮಾಡಿಕೊಂಡಿದ್ದೇವೆಂದು ಏಕೆ ಅಂದುಕೊಳ್ಳಬಾರದು?

**ನಾನು :–** ನೀವು ಹೇಳಿದಂತೆ ಅಂದುಕೊಳ್ಳಬಹುದು. ಎದುರಿಗೆ ಕಾಣಿಸುತ್ತಿದ್ದರೇ ಬಗ್ಗಿ ನೋಡು ಎನ್ನುವಂತಿದೆ ನಿನ್ನ ಮಾತು. ಒಬ್ಬ ಮುಸ್ಲಿಮ್ ಮರಣಿಸಿ ಪಕ್ಕದ ಗ್ರಾಮದಲ್ಲಿಯೇ ದೇವರು ಹುಟ್ಟಿಸಿದರೇ, ಹುಟ್ಟಿ ಪುನರ್ಜನ್ಮಗಳಿವೆಯೆಂದು ಎಲ್ಲರಿಗೂ ತಿಳಿಯುವಂತೆ ದೇವರು ಆ ಮನುಷ್ಯನಿಗೆ ಹಿಂದಿನ ಜನ್ಮದ ಜ್ಞಾಪಕವನ್ನು ಕೊಟ್ಟರೇ, ಅವನು ಮೊದಲ ಜನ್ಮದಲ್ಲಿನ ಬಂಧುಗಳನ್ನು, ಆಸ್ತಿಪಾಸ್ತಿಗಳನ್ನು ಗುರುತುಹಿಡಿಯುವಾಗ ಪುನರ್ಜನ್ಮಗಳು ಸತ್ಯವೆಂದು ಪ್ರತ್ಯಕ್ಷವಾಗಿ ದೇವರೇ ತೋರಿಸಿದಂತಲ್ಲವೆ? ಅಲ್ಲಿಗೂ ಅರ್ಥ ಮಾಡಿಕೊಳ್ಳದೇ ಪುನರ್ಜನ್ಮಗಳು ಇಲ್ಲ ಎಂದರೇ ದೇವರಿಗೆ ಕೋಪ ಬರುವುದಿಲ್ಲವಾ? **ಭೂಮಿಮೇಲೆ ನಡೆದ**

**ಯಥಾರ್ಥ ಸಂಘಟನೆಗಳನ್ನು ನೋಡಿದ ನಂತರ ನೀವೇ ನಮ್ಮ ಮಾತು ಸತ್ಯವೋ ಅಲ್ಲವೋ ನೀವೇ ನಿರ್ಣಯಿಸಿಕೊಳ್ಳಿರಿ.**

ಈಗ ಮೊದಲ ವಿಧಾನದಲ್ಲಿ ಆತ್ಮ ಗತ ಜನ್ಮಗಳನ್ನು ತಿಳಿಸಿರುವ ಯಥಾರ್ಥ ಸಂಘಟನೆಗಳನ್ನು ವಿವರಿಸಿಕೊಳ್ಳೋಣ. 1930 ನೇ ವರ್ಷ ಜೂನ್ ಅಥವಾ ಜೂಲೈ ತಿಂಗಳಲ್ಲಿ ಲೆಬನಾನ್ ದೇಶದಲ್ಲಿ "ಹಾಸನ್" ಎನ್ನುವ ಹೆಸರಿರುವ ಸ್ತ್ರೀ ಜನ್ಮಿಸಿದಳು. 'ಪುನರ್ಜನ್ಮಗಳು ಇಲ್ಲ' ಎಂದು ಹೇಳುತ್ತಿರುವ ಇಸ್ಲಾಮ್ ಮತದಲ್ಲಿ ಹಾಸನ್ ಜನ್ಮಿಸುವುದು ವಿಶೇಷ. ಆಕೆಗೆ 20 ವರ್ಷಗಳ ಯುಕ್ತವಯಸ್ಸಿನಲ್ಲಿ "ಫರೂಕ್" ಎನ್ನುವ ವ್ಯಕ್ತಿಯೊಂದಿಗೆ ವಿವಾಹ ನಡೆದಿದೆ. ಫರೂಕ್, ಹಾಸನ್ ದಂಪತಿಗಳಿಗೆ ಇಬ್ಬರು ಹೆಣ್ಣುಮಕ್ಕಳು ಹುಟ್ಟಿದ್ದಾರೆ. ಹಾಸನ್‌ಗೆ "ನಭೀ" ಎನ್ನುವ ಸೋದರನು ಸಹ ಇದ್ದನು. ಆತನು ಲೆಬನಾನ್ ದೇಶದಲ್ಲಿ ಲೆಬನಾನ್ ಸಮಾಜದಲ್ಲಿ ಬಹಳ ಹೆಸರು ಹೊಂದಿದವನು. ಆದರೇ ನಭೀ ಯುಕ್ತವಯಸ್ಸಿನಲ್ಲಿ ವಿಮಾನ ಪ್ರಮಾದದಲ್ಲಿ ಮರಣಿಸಿದ್ದಾನೆ. ಹಾಸನ್ ತನ್ನ ಎರಡನೆ ಮಗಳಿಗೆ ಜನ್ಮ ಕೊಟ್ಟಾಗ ಅನಾರೋಗ್ಯಪಾಲಾಗಿ ಗುಂಡಿಗೆ ಸಮಸ್ಯೆ ಬಂದಿದೆ. ಅದರಿಂದ ಇನ್ಮುಂದೆ ಮಕ್ಕಳನ್ನು ಹೆರಬಾರದೆಂದು ಡಾಕ್ಟರ್‌ಗಳು ಸಲಹೆ ಕೊಟ್ಟಿದ್ದಾರೆ. ಆದರೇ ಹಾಸನ್ ಆ ಸಲಹೆಯನ್ನು ಹಿಡಿಸಿಕೊಳ್ಳದಂತೆ 1962ರಲ್ಲಿ ಮೂರನೆ ಗಂಡು ಮಗುವಿಗೆ ಜನ್ಮಕೊಟ್ಟಳು. 1963ರಲ್ಲಿ ತನ್ನ ತಮ್ಮನು ನಭೀ ಸತ್ತುಹೋಗುವುದರಿಂದ ಆಕೆ ಆರೋಗ್ಯ ಇನ್ನೂ ಕ್ಷೀಣಿಸುವುದಕ್ಕೆ ಶುರು ಮಾಡಿದೆ. ಆಗ ಆಕೆ ತಾನು ಸತ್ತುಹೋಗುವುದು ಖಾಯಂ ಎಂದು ಅಂದುಕೊಂಡಿದ್ದಾಳೆ. ಸ್ವಲ್ಪ ಕಾಲಕ್ಕೆ 36 ವರ್ಷಗಳ ವಯಸ್ಸಿರುವ ಹಾಸನ್ ವರ್ಜೀನಿಯಾದಲ್ಲಿ ಇರುವ "ರಿಚ್‌ಮಡ್" ಎನ್ನುವ ಡಾಕ್ಟರ್ ಹತ್ತಿರಕ್ಕೆ ಗುಂಡಿಗೆ ಆಪರೇಷನ್‌ಗೋಸ್ಕರ ಹೋದಳು. ಆಪರೇಷನ್‌ಗೆ ಮೊದಲು ತನ್ನ ಹಿರೆಮಗಳು ಲೈಲಾಗೆ ಫೋನ್ ಮಾಡಲು ಹೋಗಿದ್ದಾಳೆ, ಆದರೆ ಮಾಡಲಾರದೆ ಹೋಗಿದ್ದಾಳೆ. ಆಪರೇಷನ್‌ನಂತರ ಒಂದು ದಿನ ಮಾತ್ರ ಬದುಕಿ ಬಹಳ ಕ್ಲಿಷ್ಟಪರಿಸ್ಥಿತಿಯಲ್ಲಿ ಹಾಸನ್ ಮರಣಿಸಿದಳು.

ಹಾಸನ್ ಮರಣಿಸಿದ ಹತ್ತು ದಿನಗಳಿಗೆ ಸುಜನ್ನೇಗಾನೆಮ್ ಎನ್ನುವ ಮಗಳು ಒಂದು ಕುಟುಂಬದಲ್ಲಿ ಹುಟ್ಟಿದ್ದಾಳೆ. ಸುಜನ್ನೆಗಾನೆಮ್ 16 ತಿಂಗಳ ವಯಸ್ಸು ಇರುವ ಚಿಕ್ಕ ಮಗುವಾಗಿದ್ದು ಮಾತುಗಳು ಬಂದೂಬಾರದ ಸಮಯದಲ್ಲಿ ಫೋನ್ ತೆಗೆದುಕೊಂಡು ಹಲೋ ಲೈಲಾ ಎಂದು ಪದೇಪದೇ ಅನ್ನುತ್ತಿದ್ದಳು. ಆ ಕುಟುಂಬದವರಿಗಾಗಲೀ, ಸುಜನ್ನೇ ತಾಯಿಗಾಗಲೀ ಲೈಲಾ ಯಾರೋ? ಅಷ್ಟು ಚಿಕ್ಕ ಹುಡುಗಿ ಹಾಗೆ ಏಕೆ ಫೋನ್‌ನಲ್ಲಿ ಕರೆಯುತ್ತಿದ್ದಾಳೋ ಅರ್ಥವಾಗಲಿಲ್ಲ. ನಂತರ ಆರು ತಿಂಗಳು ಕಳೆದ ಸುಜನ್ನೆಗೆ ಎರಡು ವರ್ಷಗಳ ವಯಸ್ಸು ಮುಗಿಯಿತು. ಆಗ ಮಾತುಗಳು ಸಹ ಚೆನ್ನಾಗಿ ಬಂದವು. ಆಗ ಆಕೆ ತಾಯಿ ಲೈಲಾ ಯಾರು ಎಂದು ಕೇಳಿದಳು. ಅದಕ್ಕೆ ಸುಜನ್ನೇಗಾನೆಮ್ ನನಗೆ ಇಬ್ಬರು ಹೆಣ್ಣುಮಕ್ಕಳಿದ್ದಾರೆಂದು, ಅವರಲ್ಲಿ ಒಬ್ಬ ಮಗಳ ಹೆಸರು ಲೈಲಾ ಎಂದು ಹೇಳಿದಳು. ಅಷ್ಟೇ ಅಲ್ಲದೆ ತನ್ನ ಹೆಸರು ಸುಜನ್ನೇ ಅಲ್ಲವೆಂದು, ತನ್ನ ಹೆಸರು ಹಾಸನ್ ಎಂದು, ತನ್ನ ಗಂಡನ ಹೆಸರು ಫರೂಕ್ ಎಂದೂ, ತನ್ನ ತಾಯಿತಂದೆಯರ ಹೆಸರುಗಳು, ತಮ್ಮಂದಿರ ಹೆಸರುಗಳು, ಉಳಿದ ಕುಟುಂಬ ಸದಸ್ಯರ ಹೆಸರುಗಳು ಒಟ್ಟು 13 ಹೆಸರುಗಳನ್ನು ಕ್ರಮವಾಗಿ ಹೇಳಿದಳು. ಇನ್ನೂ ತನ್ನ ಊರು ವೊಂದರ ವಿವರಗಳು ಕೇಳಿದರೇ ಈಗ ನನ್ನ ತಲೆ ಚಿಕ್ಕದು ಇನ್ನೂ ಸ್ವಲ್ಪ ಕಾಲಕ್ಕೆ ಎಲ್ಲ ವಿಷಯಗಳು ಹೇಳುತ್ತೇನೆಂದು ಹೇಳಿದಳು.

ಈ ವಿಧವಾಗಿ ಸುಜನ್ನೇ ಹೇಳಿದ ಮಾತುಗಳನ್ನು ಕೇಳಿ ಆಕೆ ಕುಟುಂಬದಲ್ಲಿನವರು ಸುಜನ್ನೇ ಹಿಂದಿನ ಜನ್ಮದಲ್ಲಿ ಹಾಸನ್‌ಆಗಿ ಎಲ್ಲಿ ಹುಟ್ಟಿದ್ದಾಳೋ ತಿಳಿದುಕೊಳ್ಳಬೇಕೆಂದುಕೊಂಡಿದ್ದಾರೆ. ಆ ವಾರ್ತೆಯನ್ನು ಪತ್ರಿಕೆಗಳಿಂದ ಹೊರಗೆ ತಿಳಿಸಿದ್ದಾರೆ. ಆಗ ಹಾಸನ್ ಕುಟುಂಬದವರು, ಹಾಸನ್ ಗಂಡ ಫರೂಕ್ ಸುಜನ್ನೇಯನ್ನು ನೋಡುವುದಕ್ಕೆ ಬಂದಿದ್ದಾರೆ. ಮೊದಲು ಫರೂಕ್ ಕುಟುಂಬ ಚಿಕ್ಕ ಮಗುವಾಗಿರುವ ಸುಜನ್ನೇ ಹೇಳುವ ಮಾತುಗಳನ್ನು ನಂಬಲಾರದೆ ಹೋಗಿದ್ದಾರೆ. ಹಾಸನ್ ಸಂಬಂಧಿಕರನ್ನು ಸರಿಯಾಗಿ ಅವರ ಹೆಸರುಗಳಿಂದ ಸುಜನ್ನೇ ಕರೆಯುವುದರಿಂದ ಫರೂಕ್ ಕುಟುಂಬ ಆ ಮಗುವನ್ನು

ನಂಬಿದರು. ಹಾಸನ್ ತನ್ನ ಒಡವೆಗಳನ್ನೂ, ಇತರೆ ಆಭರಣಗಳನ್ನೂ ವರ್ಜೀನಿಯಾದಲ್ಲಿನ ತನ್ನ ತಮ್ಮ ಹೆರ್‌ಕುಲೇಗೆ ಕೊಟ್ಟಿದ್ದಾಳೆ. ಇದು ಸರ್ಜರೀಗೆ ಮೊದಲು ನಡೆದ ಕಥೆ. ಆ ಒಡವೆಗಳನ್ನು ಹೆರ್‌ಕುಲೇಗೆ ಕೊಡುತ್ತಾ, ಅವುಗಳನ್ನು ತನ್ನ ಮಕ್ಕಳಿಗೆ ಕೊಡಲು ಹೇಳಿದಳು. ಈ ವಿಷಯ ಹಾಸನ್‌ಗೆ ಅವರ ಕುಟುಂಬೀಕರಿಗೆ ಹೊರತು ಮತ್ಯಾರಿಗೂ ತಿಳಿದಿಲ್ಲ. ಇವೆಲ್ಲಾ ಕೇಳಿದ ನಂತರ ಸುಜನ್ನೇ ಗತಜನ್ಮದಲ್ಲಿ ಹಾಸನ್‌ಆಗಿ ಇದ್ದಾಳೆಂದು ಧೃಢೀಕರಿಸಲ್ಪಟ್ಟಿತು.

ಓದುವುದಕ್ಕಾಗಲೀ, ಬರೆಯುವುದಕ್ಕಾಗಲೀ ಬರುವುದಕ್ಕಿಂತ ಮುಂಚೆಯೇ ಸುಜನ್ನೇ ಪೇಪರ್ ಮೇಲೆ ಯಾವುವೋ ನಂಬರ್‌ಗಳನ್ನು ಬರೆಯುತ್ತಿದ್ದಳು. ನಂತರ ಆ ನಂಬರ್‌ಗಳು ಫರೂಕ್ ಮನೆ ಫೋನ್ ನಂಬರೆಂದು ತಿಳಿಯಿತು. ಸುಜನ್ನೇಗೆ ಐದು ವರ್ಷಗಳ ವಯಸ್ಸಿರುವಾಗಲೇ ದಿನಕ್ಕೆ ಮೂರು ಬಾರಿ ಫರೂಕ್‌ಗೆ ಫೋನ್ ಮಾಡುತ್ತಿದ್ದಳು. ಫರೂಕ್‌ನ್ನು ಭೇಟಿಮಾಡಿದಾಗ ಸುಜನ್ನೇ ಆತನ ಮಡಿಲಲ್ಲಿ ಕುಳಿತುಕೊಂಡು ಮಲಗುತ್ತಿದ್ದಳು. ಪೊಲೀಸ್ ಉದ್ಯೋಗ ಮಾಡುವ ಫರೂಕ್, ಮರಣಿಸಿದ ತನ್ನ ಹೆಂಡತಿ ಹಾಸನ್ ಸುಜನ್ನೇಯಾಗಿ ಜನ್ಮಿಸಿದ್ದಾಳೆಂದು ಅಂಗೀಕರಿಸಿದನು. ಸುಜನ್ನೇಗೆ ಯಾವಾದರೂ ಫೋಟೋಗಳು ತೋರಿಸಿದರೇ ಅದರಲ್ಲಿರುವವರನ್ನು ಗುರುತಿಸುವುದೇ ಅಲ್ಲದೇ, ಹಾಸನ್‌ಗೆ ಆ ಫೋಟೋದವರೊಂದಿಗೆ ಸಂಬಂಧವನ್ನು ಸುಜನ್ನೇ ವಿವರಿಸುತ್ತಿದ್ದಳು. ಕೆಲವು ಹಾಸನ್‌ಗೆ ಹೊರತು ಯಾರಿಗೂ ತಿಳಿಯದ ವಿಷಯಗಳನ್ನು ಸುಜನ್ನೇ ವಿವರಿಸುತ್ತಿದ್ದಳು ಇದರಿಂದ ಹೋದ ಜನ್ಮದಲ್ಲಿನ ಹಾಸನ್ ಈ ಜನ್ಮದಲ್ಲಿ ಸುಜನ್ನೇಯಾಗಿ ಹುಟ್ಟಿದ್ದಾಳೆಂದು ಪೂರ್ತಿ ನಿರೂಪಣೆಗೆ ಬಂದಿದೆ. ಈ ವಿಷಯದಿಂದ ಪುನರ್ಜನ್ಮ ಇದೆಯೆಂದು ನಿರೂಪಿಸಲ್ಪಟ್ಟಿತು. 40 ವರ್ಷಗಳ ಕೆಳಗೆ ನಡೆದ ಈ ಸಂಘಟನೆಯನ್ನು ಯಾರೂ ಅಲ್ಲಗಳೆಯುವುದಿಲ್ಲ ಮತ್ತು ಖಂಡಿಸಲಾರರು.

ಇದಕ್ಕೆ ಅನುಸಂಧಾನವಾಗಿ ಪವಿತ್ರ ಖುರಾನ್‌ನಲ್ಲಿ ಸೃಷ್ಠಿಕರ್ತನಾದ ದೇವರು ಮತ್ತೊಂದು ಮಾತನ್ನು ಸಹ ಹೇಳಿದ್ದಾನೆ. 53ನೇ ಸೂರಾ ಅನ್‌ನಜ್ಮ್

(ನಕ್ಷತ್ರ) 44, 45, 46 ಆಯತ್‌ಗಳಲ್ಲಿ **44) ನಿಶ್ವಯವಾಗಿ ಆತನೇ ಮರಣಿಸುವಂತೆ ಮಾಡುವವನು ಮತ್ತು ಜೀವನವನ್ನು ಪ್ರಸಾದಿಸುವವನು. 45) ನಿಶ್ಚಯವಾಗಿ ಹೆಣ್ಣು ಮತ್ತು ಗಂಡು ಜೋಡಿಗಳನ್ನು ಸೃಷ್ಟಿಸಿದವನು ಆತನೇ, 46) ಪ್ರವಹಿಸಲ್ಪಟ್ಟ ವೀರ್ಯ ಬಿಂದುವಿನಿಂದ ಮತ್ತೊಂದು ಜೀವನವನ್ನು ಪ್ರಸಾದಿಸುವುದು ಆತನಿಗೇ (ದೇವರಿಗೇ) ಸಲ್ಲುತ್ತದೆ**. ಈ ವಿಧವಾಗಿ ಖುರಾನ್‌ನಲ್ಲಿ ಇನ್ನು ಕೆಲವು ವಾಕ್ಯಗಳು ಕಾಣಿಸಬಲ್ಲವು. ಅವುಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡಾಗ ಮೇಲೆ ಹೇಳಿಕೊಂಡ ಹಾಸನ್ 36 ವರ್ಷಗಳಿಗೆ ಮರಣಿಸಿ ಪುನಃ ಹತ್ತು ದಿನಗಳಿಗೇ ಸುಜನ್ನೇಯಾಗಿ ಜನ್ಮಿಸಿದ ಸತ್ಯ ಅರ್ಥವಾಗುತ್ತದೆ. ಹಾಸನ್ ಮರಣಿಸಿ ಪುನಃ ಹುಟ್ಟಿರುವುದು ಸತ್ಯವಾದಾಗ ಪುನರ್ಜನ್ಮಗಳು ಇಲ್ಲ ಎನ್ನುವ ಅವರ ಮಾತುಗಳು ಅಸತ್ಯವಾಗುತ್ತವೆ. ಅಂತಹ ಅಸತ್ಯಗಳನ್ನು ಪ್ರವಕ್ತರಿಗೆ ಅಂಟಿಸಿ ಅವರ ದೊಡ್ಡಸ್ತಿಕೆಗೆ ಆತಂಕ ಉಂಟುಮಾಡ ಬಾರದು. ಪ್ರವಕ್ತರ ಮಾತುಗಳನ್ನು ತಪ್ಪಾಗಿ ಅರ್ಥಮಾಡಿಕೊಳ್ಳುವುದರಿಂದ, ದೇವರ ಮಾತುಗಳನ್ನೇ ಅಸತ್ಯಮಾಡಿ ದಂತಾಗುತ್ತದೆ. ದೇವರ ಮಾತುಗಳನ್ನು ಅಸತ್ಯವಾಗಿ ತೋರಿಸುವುದರಿಂದ, ಯಾರಿಗಾದರೂ ಭಯಂಕರವಾದ ಪಾಪ ಸಂಭವಿಸಬಲ್ಲದು. ಆದ್ದರಿಂದ ದೇವರ ಜ್ಞಾನವನ್ನು ಯಾವ ಮತಸ್ಥರಾದರೂ ಸರಿಯಾಗಿ ಅರ್ಥಮಾಡಿಕೊಳ್ಳಬೇಕೆಂದು ಕೋರುತ್ತಿದ್ದೇನೆ. ಖುರಾನ್‌ನನ್ನು ಪರಿಶೋಧಿಸಿದ ಕೆಲವರು ಹಿರಿಯರು ಖುರಾನ್‌ನಲ್ಲಿ ಇನ್ನೂ ಕೆಲವು ವಾಕ್ಯಗಳು ಪುನರ್ಜನ್ಮಗಳನ್ನು ಕುರಿತು ಇವೆಯೆಂದು ಬರೆದಿದ್ದಾರೆ. ಅವುಗಳನ್ನು ಕೆಳಗೆ ಹೊಂದಿಸುತ್ತಿದ್ದೇವೆ ನೋಡಿರಿ.

1) ಮತ್ತೆ ಯಾವಾಗಾದರೇ ಶರೀರ ನಶಿಸುತ್ತದೋ, ಆಗ ಆತ್ಮ (ಜೀವಾತ್ಮ) ಆ ಒಂದು ಹಳೆ ಕವಚವನ್ನು ಬಿಟ್ಟು, ಅದರಿಂದ ಬಿಡುಗಡೆಯಾಗಿ ಹೊಸ ಶರೀರವನ್ನು ಧರಿಸುತ್ತದೆ. ಮಾನವ ದೇಹ ಒಬ್ಬ ವ್ಯಕ್ತಿಗೆ ಒಂದು ಋತುವಿನಂತೆ ಸ್ವಲ್ಪ ಕಾಲವಿರುತ್ತದೆ. ಆತ್ಮಕ್ಕೆ ಆ ಸಮಯ ಪೂರ್ತಿ ಆದಕೂಡಲೇ ಅದನ್ನು ಬಿಟ್ಟು ಮತ್ತೊಂದು ಶರೀರವನ್ನು ತೆಗೆದುಕೊಳ್ಳುತ್ತದೆ.

2) ದೈವತ್ವವು ಆತ್ಮಗಳನ್ನು (ಜೀವಿಗಳನ್ನು) ಉದ್ಭವಿಸುವಂತೆ ಮಾಡುತ್ತದೆ. ಇಲ್ಲಿಗೆ ಪುನಃಪುನಃ ಕಳುಹಿಸುತ್ತಿರುತ್ತದೆ. ಯಾವಾಗಾದರೇ ಆ ಆತ್ಮ ದೈವತ್ವವನ್ನು ಪುನಃ ಸೇರಿಕೊಳ್ಳುತ್ತದೋ ಆಗ ಆ ಆತ್ಮ ಪುನಃ ಜನ್ಮಿಸಬೇಕಾದ ಅವಶ್ಯವಿಲ್ಲ.

3) ಸೃಷ್ಠಿಕರ್ತನಾದ ದೇವರು ನಿನ್ನನ್ನು ತಯಾರು ಮಾಡಿದರೂ, ನೀನು ಮರಣಿಸಿದಾಗ ಪುನಃ ಜನ್ಮಿಸುವಂತೆ ಮಾಡಿದರೂ, ಹಾಗೆಯೇ ನೀನು ಜನ್ಮಿಸಿದ ನಂತರ ನಿನ್ನನ್ನು ಮರಣಿಸುವಂತೆ ಮಾಡಿದರೂ, ಹೀಗೆ ತನ್ನನ್ನು ನೀನು ಸೇರುವವರೆಗು ಈ ಜನನ ಮರಣ ಸಮೂಹದಲ್ಲಿ ನಿನ್ನನ್ನು ಪ್ರವೇಶವಿಟ್ಟರೂ ಆ ದೈವತ್ವವನ್ನು, ದೇವರನ್ನು ವಿಸ್ಮರಿಸುತ್ತೀಯಾ.

4) ನಿನ್ನನ್ನು ಸೃಷ್ಠಿಸಿ ನಿನಗೊಂದು ಇರುವಿಕೆಯನ್ನು ತಯಾರಿಸಿರುವುದು, ನೀನು ಮರಣಿಸಿದರೇ ನಿನ್ನನ್ನು ಜನ್ಮಿಸುವಂತೆ ಮಾಡುತ್ತಿರುವುದು, ನೀನು ಜನ್ಮಿಸಿದ ನಂತರ ನಿನ್ನನ್ನು ಮರಣಿಸುವಂತೆ ಮಾಡುತ್ತಿರುವುದು ಆ ದೇವರು ಒಬ್ಬನೇ.

5) ಕಲ್ಲಿನಿಂದ ಬೀಜವನ್ನು ಹೊಡೆದುಕೊಂಡು ಮೊಳಕೆ ಬರುವಂತೆ ಮಾಡುವುದು, ಮರಣಿಸಿದವರನ್ನು ಪುನಃ ಜನ್ಮಿಸುವಂತೆ ಮಾಡುವುದು, ಜೀವಿಸುತ್ತಿರುವವರನ್ನು ಪುನಃ ಮರಣಿಸುವಂತೆ ಮಾಡುವುದು ಆ ದೈವತ್ವವೇ.

6) ಈಗ ನಿಮಗೆ ಸತ್ಯವನ್ನು ಬೋಧಿಸುತ್ತಿದ್ದೇನೆ, ಯಾವ ಆತ್ಮಗಳಿಗಾದರೇ ಒಂದರ ಬಗ್ಗೆ (ದೈವದ ಬಗ್ಗೆ) ತೀವ್ರ ಆಸಕ್ತಿ, ಇಷ್ಟ ಇದ್ದರೆ ಆ ಆತ್ಮಗಳು ಎಷ್ಟು ಶರೀರಗಳು ಧರಿಸಿದರೂ, ಎಷ್ಟು ಹೆಸರುಗಳು ಹೊಂದಿದರೂ ಸರಿ ಅವು ದೇವರಿಗೆ ಹತ್ತಿರವಾಗುತ್ತವೆ.

ಈ ವಾಕ್ಯಗಳು ದೈವತ್ವವೊಂದರ ಹಿರಿಮೆಯನ್ನು ತಿಳಿಸುವುದೇ ಅಲ್ಲದೆ, ಮನುಷ್ಯನಿಗೆ ಜನ್ಮಗಳಿವೆಯೆಂದು ಕೂಡಾ ತಿಳಿಸುತ್ತಿವೆ. ಮನುಷ್ಯ ತಾನು ಮಾಡಿಕೊಂಡ ಪಾಪಪುಣ್ಯಗಳನ್ನು ಅನುಭವಿಸುವುದಕ್ಕೇ ಹುಟ್ಟುತ್ತಿದ್ದಾನೆನ್ನುವುದು

ಸತ್ಯ. ಅದನ್ನೇ ಕರ್ಮಸಿದ್ಧಾಂತ ಎನ್ನುತ್ತಿದ್ದೇವೆ. ಆ ಕರ್ಮ ಸಿದ್ಧಾಂತವನ್ನು ತಿಳಿಸುವ ವಾಕ್ಯಗಳು ಕೂಡಾ ಪವಿತ್ರ ಖುರಾನ್ ಗ್ರಂಥದಲ್ಲಿ ಪ್ರವಕ್ತರವರು ಅಲ್ಲಲ್ಲಿ ತಿಳಿಸಿದ್ದಾನೆ. ಅವುಗಳಲ್ಲಿ ಕೆಲವು ಈ ವಿಧವಾಗಿ ಇವೆ.

1) ದೈವತ್ವ ಅಥವಾ ದೇವರು ಯಾವ ಆತ್ಮವನ್ನೂ (ಯಾವ ಜೀವಿಯನ್ನು) ತನ್ನ ಶಕ್ತಿಗೆ ಮೀರಿ ಮಾಡೆಂದು ನಿರ್ದೇಶಿಸುವುದಿಲ್ಲ. ಆ ಆತ್ಮ ಏನು ಸಂಪಾದಿಸಿ ಕೊಂಡಿದೆಯೋ ಅದನ್ನೇ ಹೊಂದುತ್ತದೆ. ಮತ್ತೆ ಅದಕ್ಕೆ ಯಾವುದು ಲಭಿಸುತ್ತದೆನ್ನುವುದು ಅದರ ಜವಾಬ್ದಾರಿಯೇ.

2) ಪ್ರತಿ ಆತ್ಮ ತಾನು ಮಾಡಿದ ಒಳ್ಳೆಯದನ್ನು ಪುನಃ ಹೊಂದುತ್ತದೆ. ಹಾಗೆಯೇ ತಾನು ಮಾಡಿದ ಕೆಡಕನ್ನೂ ಪುನಃ ಹೊಂದುತ್ತದೆ.

3) ನಾವು ನಮ್ಮ ಕರ್ಮಗಳ ಲೆಕ್ಕಗಳು ನೋಡಿಕೊಂಡಾಗ ನಾವೇ ನಮ್ಮನ್ನು ತೀರ್ಮಾನಿಸಿಕೊಳ್ಳುತ್ತೇವೆ. ಯಾವ ಆತ್ಮವಾಗಲೀ, ಯಾವುದಕ್ಕಾಗಲೀ ದೋಷಿ ಅಲ್ಲ. ಆದರೇ ಸಾಸಿವೆಕಾಳಷ್ಟಾದರೂ ಸರಿ ಆ ಕರ್ಮವನ್ನು ಅದು ಪಾಪವಾದರೂ, ಪುಣ್ಯವಾದರೂ ನಾವು ಪುನಃ ಹೊಂದುತ್ತೇವೆ. ನಮ್ಮ ಆತ್ಮ ಕ್ಷೇತ್ರ ಆ ಲೆಕ್ಕ ವಿಷಯದಲ್ಲಿ ಬಹಳ ಪಕ್ಕಾ ಇರುತ್ತದೆ.

4) "ನಾವು ಇತರರಿಗೆ ಏನು ಮಾಡಿದ್ದೇವೆ, ಇತರರು ನಮಗೆ ಏನು ಮಾಡಿದ್ದಾರೆ" ಎನ್ನುವ ಎಲ್ಲ ವಿಷಯಗಳು ಬಹಳ ಲೆಕ್ಕಾಚಾರವಾಗಿ ನಮ್ಮ ಹತ್ತಿರ ಇರುತ್ತವೆ.

5) ವಿಶ್ವ ಮಾನವರ ಕುರಿತು ಖುರಾನ್‌ನಲ್ಲಿ ಅತ್ಯದ್ಭುತವಾದ ವಾಕ್ಯಗಳಿವೆ. ಆದರೆ ಮತಗಳೊಂದರ ಸಂಕುಚಿತ ಅವಗಾಹನೆಯಿಂದ ಈ ಸತ್ಯವನ್ನು ನಾವು ಮರೆತು ಹೋಗಿದ್ದೇವೆ. ಪ್ರಪಂಚದಲ್ಲಿನ ಯಾವ ಮತಸ್ಥರಾದರೂ ಸರಿ, ಯಾರಾದರೇ ದೈವವನ್ನು ವಿಶ್ವಾಸಿಸುತ್ತಾರೋ ಅವರಿಗೆ ಕೊನೆಯದಿನದಂದು ಭಯವಿಲ್ಲ ಮತ್ತು ಅವರು ದುಃಖಿಸುವುದಿಲ್ಲ. ನೋಡಿದ್ದೀರಾ! ಈ ವಾಕ್ಯ ಎಷ್ಟು ದೊಡ್ಡದಾಗಿ ಇದೆಯೋ?

ಕರ್ಮ ಸಿದ್ಧಾಂತ ವಾಕ್ಯಗಳನ್ನನುಸರಿಸಿ ಖುರಾನ್ ಬಹಳ ದೊಡ್ಡದು. ಪ್ರಪಂಚದಲ್ಲಿನ ಸಮಸ್ತ ಮಾನವರಿಗೂ ಅನ್ವಯಿಸುವ ಸೂತ್ರಗಳನ್ನು ಹೇಳಿರುವುದೆಂದು ಅರ್ಥವಾಗುತ್ತಿದೆ. ಖುರಾನ್ ಹೇಳಿದ ಕರ್ಮಸಿದ್ಧಾಂತದ ಪ್ರಕಾರ ಮನುಷ್ಯ ಮಾಡಿಕೊಂಡ ಕರ್ಮಕ್ಕೆ ಮನುಷ್ಯನೇ ಜವಾಬ್ದಾರನು. ಮನುಷ್ಯ ಮಾಡಿಕೊಂಡಿರುವುದನ್ನು ಅನುಭವಿಸುವಂತೆ ಮಾಡುವುದಕ್ಕೆ ಮನುಷ್ಯನನ್ನು ದೇವರು ಪುನಃ ಹುಟ್ಟಿಸಬೇಕಾಗಿ ಬಂದಿದೆ. ಯಾವ ಕರ್ಮ ಇಲ್ಲದವನು ಪುನಃ ಹುಟ್ಟಬೇಕಾದ ಅವಶ್ಯವಿಲ್ಲ. ಅಂತಹವರು ದೇವರ ಸನ್ನಿಧಾನದಲ್ಲಿಯೇ ಇದ್ದುಹೋಗುತ್ತಾರೆ. ದೇವರು ಮೊದಲು ಕರ್ಮ ಇಲ್ಲದ ಮನುಷ್ಯನನ್ನು ಹುಟ್ಟಿಸಿ ತಾನೇ ಆತನನ್ನು ಜೀವಿಸುವಂತೆ ಮಾಡಿದಾಗ, ಮನುಷ್ಯ ತನ್ನನ್ನು ಹುಟ್ಟಿಸಿದ ದೇವರನ್ನೇ ಮರೆತುಹೋಗಿ, ತಾನೇ ಬದುಕುತ್ತಿದ್ದೇನೆಂದು ಅಂದುಕೊಂಡು ಇಲ್ಲದ ಕರ್ಮವನ್ನು ಸಂಪಾದಿಸಿಕೊಂಡು ಪುನಃ ಪುನಃ ಹುಟ್ಟಿಸಲ್ಪಡುತ್ತಿದ್ದಾನೆ. ನಾವು ಇಷ್ಟಾಗಿ ಪುನರ್ಜನ್ಮಗಳಿವೆಯೆಂದು ಹೇಳಿದರೂ ನಂಬದವರಿರಬಹುದು. ಅದಕ್ಕೆಂದು ಮುಸ್ಲಿಮ್ ಕುಟುಂಬದಲ್ಲಿ ಮರಣಿಸಿ ಪುನಃ ಮುಸ್ಲಿಮ್ ಕುಟುಂಬದಲ್ಲೇ ಹುಟ್ಟಿದ ಒಬ್ಬ ವ್ಯಕ್ತಿವೊಂದರ ವಾಸ್ತವ ಸಂಘಟನೆಯನ್ನು ನೋಡೋಣ. ಇದಕ್ಕೂ ಮೊದಲು ಹೇಳಿರುವುದು ಒಬ್ಬ ಮುಸ್ಲಿಮ್ ಸ್ತ್ರೀಯಾದ ಹಾಸನ್‌ರವರ ಪುನರ್ಜನ್ಮ. ಈಗ ಒಬ್ಬ ಮುಸ್ಲಿಮ್ ಆದ ಪುರುಷನ ಜನ್ಮವನ್ನು ಕುರಿತು ಹೇಳುತ್ತಿದ್ದೇವೆ. ಇದು ಕೂಡಾ ಲೆಬನಾನ್ ದೇಶದಲ್ಲಿ ನಡೆದಿರುವುದೇ.

1943ರಲ್ಲಿ ಲೆಬನಾನ್ ದೇಶದಲ್ಲಿ "ಫರ್‌ಮಟ್ಟ" ಎನ್ನುವ ನಗರದಲ್ಲಿ ರಷೀದ್ ಖಾದೀಜ್ ಎನ್ನುವ ವ್ಯಕ್ತಿ ಜನ್ಮಿಸಿದ್ದಾನೆ. ಆತನು ಆಟೋ ಮೊಬೈಲ್ ಮೆಕಾನಿಕ್ ಆಗಿ ಜೀವಿಸುತ್ತಿದ್ದನು. ಆತನಿಗೆ 25 ವರ್ಷಗಳ ವಯಸ್ಸಿನಲ್ಲಿ ಒಂದು ದಿನ ಇಬ್ರಹೀಮ್ ಎನ್ನುವ ಸ್ನೇಹಿತನು ರಷೀದ್‌ನನ್ನು ಕಾರಿನಲ್ಲಿ ಷಿಕಾರಿಗೆ ಕರೆದುಕೊಂಡು ಹೋಗಿದ್ದಾನೆ. ಇಬ್ರಹೀಮ್ ಸಮುದ್ರ ಪ್ರಾಂತದಲ್ಲಿ ಕಾರನ್ನು ವೇಗವಾಗಿ ನಡೆಸುತ್ತಿರುವಾಗ, ಮಿಲಿಟರೀ ಬೀಚ್ ಎನ್ನುವ ಸ್ಥಳದಲ್ಲಿ ಕಾರು ಹಿಡಿತ ತಪ್ಪಿ ಅಪಘಾತಕ್ಕೆ ಗುರಿಆಯಿತು. ಆಗ ರಷೀದ್ ಕಾರಿನಲ್ಲಿಂದ

ಹೊರಗೆ ಬಿದ್ದನು. ಹಾಗೆ ಬಿದ್ದಾಗ ತಲೆಗೆ ಬಲವಾದ ಗಾಯ ಆದಾಗ ರಷೀದ್ ಸ್ಥಳದಲ್ಲೇ ಮರಣಿಸಿದ್ದಾನೆ. ರಷೀದ್ ಮರಣಿಸಿದ ನಂತರ ಒಂದು ವರ್ಷಕ್ಕೆ "ಡಾನಿಯಲ್‌ಜರ್ದೀ" ಎನ್ನುವಾತನು ಜನ್ಮಿಸಿದ್ದಾನೆ. ಡಾನಿಯಲ್ ಜರ್ದೀಗೆ ಮಾತುಗಳು ಬಂದಾಗ ನುಡಿದ ಮೊದಲ ಮಾತು ಇಬ್ರಹೀಮ್. ಅಪಘಾತ ನಡೆದ ದಿನದಂದು ಕಾರು ಓಡಿಸಿದ ತನ್ನ ಸ್ನೇಹಿತನ ಹೆಸರು ಇಬ್ರಹೀಮ್. ಡಾನಿಯಲ್ ಜರ್ದೀ ಹಾಗೆ ಅನ್ನುವುದು ಯಾರಿಗೂ ಅರ್ಥವಾಗಲಿಲ್ಲ. ಇಬ್ರಹೀಮ್ ಎಂದು ಏಕೆ ಅಂದಿದ್ದಾನೋ ತಿಳಿಯಲಿಲ್ಲ. ನಂತರ ಎರಡು ವರ್ಷ ವಯಸ್ಸಿನಲ್ಲಿ ಡಾನಿಯಲ್ ಜರ್ದೀ, ತನ್ನತಾಯಿ "ಲತೀಷಾ"ರೊಂದಿಗೆ ನಾನು ಮನೆಗೆ ಹೋಗಬೇಕು ಎಂದಿದ್ದಾನೆ. ನಂತರ ಆರು ತಿಂಗಳಿಗೆ, ಅಂದರೆ ಎರಡೂವರೆ ವರ್ಷಕ್ಕೆ ಇದು ನನ್ನ ಮನೆ ಅಲ್ಲ. ನೀನು ನನ್ನ ತಾಯಿ ಅಲ್ಲ. ನನಗೆ ತಂದೆ ಇಲ್ಲ, ನನ್ನ ತಂದೆ ಮರಣಿಸಿದ್ದಾನೆ ಎಂದು ಕೆಲವು ಮಾತುಗಳು ಮಾತನಾಡಿದ್ದಾನೆ. ಅಂದಿನ ತನ್ನ ತಂದೆ ಆದ ಯೂಸಪ್‌ನನ್ನು ತಂದೆ ಎಂದು ಕರೆಯದಂತೆ ಯೂಸಪ್ ಎಂದು ಹೆಸರಿನಿಂದ ಕರೆಯುತ್ತಿದ್ದನು. ಅಷ್ಟೇ ಅಲ್ಲದೆ ತನ್ನ ತಂದೆ "ನಯೀಮ್" ಎಂದು ಹೇಳುತ್ತಿದ್ದನು. ನಯೀಮ್ ಎನ್ನುವುದು ರಷೀದ್ ತಂದೆಯೊಂದರ ಹೆಸರು.

ಡಾನಿಯಲ್ ಜರ್ದೀಗೆ ಎರಡೂವರೆ ವರ್ಷಗಳ ವಯಸ್ಸಿನಲ್ಲಿಯೇ ಆತನ ಕುಟುಂಬವೆಲ್ಲಾ ಪಿಕ್ನಿಕ್‌ಗೆ ಹೋದಾಗ ಅವರೊಂದಿಗೆ ಜರ್ದೀ ಕೂಡಾ ಹೋಗಿದ್ದಾನೆ. ಆಗ ಅವರ ಬಂಧುಗಳಲ್ಲಿ ಒಬ್ಬರು ಪರ್‌ಮಟ್‌ಟಾ ಎನ್ನುವ ಹೆಸರನ್ನು ತಪ್ಪಾಗಿ ಉಚ್ಚರಿಸಿದಾಗ, ಜರ್ದೀ ಸರಿಮಾಡಿ ಹೇಳಿದ್ದಾನೆ. ಆಗ ಜರ್ದೀ ತಂದೆಯಾದ ಯೂಸಫ್ ಈ ಹೆಸರು ನಿನಗೆ ಹೇಗೆ ತಿಳಿದಿದೆ ಎಂದು ಕೇಳಿದಾಗ! ಈ ನಗರದ ಹೆಸರು ನನಗೆ ಚೆನ್ನಾಗಿ ತಿಳಿದಿದೆ. ಇದು ನಾನು ನಿವಾಸಿಸಿದ ನಗರವೇ ಎಂದು ಹೇಳಿದ್ದಾನೆ. ಡಾನಿಯಲ್ ಜರ್ದೀ ಹೇಳಿದ ಮಾತುಗಳು ಆತನ ಕುಟುಂಬದವರಿಗೆ ಏನೂ ಅರ್ಥವಾಗಲಿಲ್ಲ. ನಂತರ ಸ್ವಲ್ಪ ಕಾಲಕ್ಕೆ ಡಾನಿಯಲ್ ಜರ್ದೀ, ತನ್ನ ತಾಯಿ ಕಾರಲ್ಲಿ ಪ್ರಯಾಣಿಸುತ್ತಿರುವಾಗ,

ಅವರ ಕಾರು ಮಿಲಟರೀ ಬೀಚ್ ಹತ್ತಿರಕ್ಕೆ ಬಂದಾಗ ಆ ಪ್ರದೇಶವನ್ನು ನೋಡಿದ ಡಾನಿಯಲ್ ಕಣ್ಣು ಮುಚ್ಚಿಕೊಂಡು, ಕೈಗಳಿಂದ ಮುಖವನ್ನು ಬಚ್ಚಿಟ್ಟುಕೊಂಡು ಅಳಲು ಶುರುಮಾಡಿದನು. ನಂತರ "ನಾನು ಮರಣಿಸಿರುವುದು ಇಲ್ಲೇ" ಎಂದು ಜೋರಾಗಿ ಕೂಗಿದನು. ಅಷ್ಟೇ ಅಲ್ಲದೆ ಗತಜನ್ಮದಲ್ಲಿ ತಾನು ಕಾರು ಮೆಕಾನಿಕ್ ಎಂದೂ, ತನ್ನ ಸ್ನೇಹಿತನು ಇಬ್ರಹೀಮ್ ಕಾರು ನಡೆಸುತ್ತಿರುವಾಗ ಕಾರು ಹಿಡಿತ ತಪ್ಪಿತೆಂದು, ಆಗ ಹೊರಬಿದ್ದ ತಾನು ತಲೆಗೆ ಗಾಯವಾಗಿ ಮರಣಿಸಿದ್ದೇನೆಂದು ಹೇಳಿದ್ದಾನೆ.

ಸ್ಕೂಲಲ್ಲಿ ಡಾನಿಯಲ್ ಜರ್ದೀ ನರ್ಸರೀ ಓದುತ್ತಿರುವ ದಿನಗಳಲ್ಲಿ ತನ್ನ ಹೆಸರು ಡಾನಿಯಲ್ ಜರ್ದೀ ಅಲ್ಲವೆಂದು, ರಷೀದ್ ಖಾದೀಜ್ ಎಂದು ಹೇಳಿದ್ದಾನೆ. ಅದೇ ಸ್ಕೂಲಲ್ಲೇ ಮತ್ತೊಂದು ಸಂದರ್ಭದಲ್ಲಿ ಯುಕ್ತವಯಸ್ಸಿನಲ್ಲಿರುವ ಅಂದವಾದ ಲೇಡೀಟೀಚರ್‌ನನ್ನು ಚಿಕ್ಕದಾಗಿ ಚಿವುಟಿ ನೀನು ಬಹಳ ಸುಂದರ ವಾಗಿದ್ದೀಯೆಂದು ಹೇಳಿದನಂತೆ. ಆ ವಿಧವಾಗಿ ಮಾತುಗಳಲ್ಲೂ, ಕೈಚಳಕದಲ್ಲೂ ಕೆಲವು ಸಂದರ್ಭಗಳಲ್ಲಿ ವಿಚಿತ್ರವಾಗಿ ಕಾಣಿಸುತ್ತಿರುವ ಡಾನಿಯಲ್, ಹೇಳುವುದು ಎಷ್ಟರಮಟ್ಟಿಗೆ ನಿಜವೋಯೆಂದು ತಿಳಿದುಕೊಳ್ಳುವುದಕ್ಕೆ ಆತನ ತಂದೆ ಯೂಸಫ್, ಪರ್‌ಮಟ್‌ಟಾಗೆ ಹೋಗಿ ಡಾನಿಯಲ್ ವರ್ಣಿಸಿದ ವಿಧವಾಗಿ ಕಾರು ಮೆಕಾನಿಕ್‌ನನ್ನು ಕುರಿತು, ಮಿಲಟರೀ ಬೀಚ್‌ಹತ್ತಿರ ಆಕ್ಸಿಡೆಂಟ್‌ನ್ನು ಕುರಿತು ವಿಚಾರಿಸಿದಾಗ ಡಾನಿಯಲ್ ಹೇಳಿರುವುದೆಲ್ಲಾ ನಿಜವೆಂದು ತಿಳಿಯಿತು. ಈ ವಿಷಯವನ್ನು ತಿಳಿದುಕೊಂಡ ರಷೀದ್ ಖಾದೀಜ್‌ರವರ ಬಂಧುಗಳು, ಮಿತ್ರರೂ ಡಾನಿಯಲ್‌ನನ್ನು ನೋಡುವುದಕ್ಕೆ ಹೊರಟು ಹೋಗಿದ್ದಾರೆ. ಹಾಗೆ ಹೋದವ ರನ್ನು ನೋಡಿದ ಡಾನಿಯಲ್ ರಷೀದ್ ತಂಗಿ ನಜ್ಮಾಳನ್ನು ಕೂಡಲೇ ಗುರುತಿಸಿ ಆಕೆಯನ್ನು ಹೆಸರಿನಿಂದ ಕರೆದಿದ್ದಾನೆ. ಮೊದಲು ತನ್ನ ಬಂಧುಗಳೆಲ್ಲರನ್ನು ನೋಡಿದ ಕೂಡಲೇ ಡಾನಿಯಲ್ ತನ್ನ ತಾಯಿ ಲತೀಷಾಳಿಂದ ಅವರೆಲ್ಲರಿಗೂ ಬಾಳೆಹಣ್ಣು ತಂದು ಕೊಡಲು ಹೇಳಿದ್ದಾನೆ. ಗತ ಜನ್ಮದಲ್ಲಿ ರಷೀದ್‌ಗೆ ಬಾಳೆಹಣ್ಣೆಂದರೇ ಬಹಳ ಇಷ್ಟ. ರಷೀದ್ ಮರಣದ ನಂತರ ರಷೀದ್ ನೆನಪಿಗೆ

ಬಾರದಂತೆ ಇರುವುದಕ್ಕೆ ರಷೀದ್ ತಾಯಿ ಆತನ ತಂಗಿ ಇಬ್ಬರೂ ಬಾಳೆಹಣ್ಣು ತಿನ್ನುವುದು ಬಿಟ್ಟಿದ್ದಾರೆ. ನಂತರ ಡಾನಿಯಲ್ ಪರ್‌ಮಟ್‌ಟಗೆ ಹೋದಕೂಡಲೇ ತನ್ನ ಸ್ನೇಹಿತನಾದ ಇಬ್ರಹೀಮ್ ಮತ್ತೊಬ್ಬ ಸ್ನೇಹಿತನಾದ ಬಜಾಜ್‌ನನ್ನು ಗುರುತಿಸಿ ಮಾತನಾಡಿದ್ದಾನೆ.

ರಷೀದ್ ಕುಟುಂಬದವರೆಲ್ಲಾ ರಷೀದ್ ಪುನಃ ಡಾನಿಯಲ್ ಜರ್ದೀಯಾಗಿ ಹುಟ್ಟಿದ್ದಾನೆಂದು ಅಂಗೀಕರಿಸಿದ್ದಾರೆ. ರಷೀದ್ ಕುಟುಂಬ ಡಾನಿಯಲ್ ಫೋಟೋವನ್ನು ತಮ್ಮ ಮನೆಯಲ್ಲಿ ಇಟ್ಟುಕೊಂಡಿದ್ದಾರೆ. ರಷೀದ್ ತನ್ನ ಎರಡನೆ ಜನ್ಮದಲ್ಲಿ ಕೂಡಾ ಕಾರು ನಡೆಸಬೇಕೆಂದರೇ ಭಯಪಡುತ್ತಿದ್ದನು. ಈ ವಿಧವಾಗಿ ಕಾರು ನಡೆಸಬೇಕೆಂದರೇ ಬರುವ ಭಯವಾಗಲೀ, ಹಿಂದಿನ ಜನ್ಮ ಜ್ಞಾಪಕವಾಗಲೀ ಡಾನಿಯಲ್ ತಂದುಕೊಂಡರೇ ಬಂದಿರುವವಲ್ಲ. ಡಾನಿಯಲ್‌ಗೆ ಯಾವ ಮಾತ್ರ ಸಂಬಂಧ ಇಲ್ಲದಂತೆ ಆತನ ಶರೀರದಲ್ಲಿರುವ ಆತ್ಮ ಮಾಡಿದ ಮೂರನೆ ಕೆಲಸವಾಗಿ ನಾವು ಗುರುತಿಸಬಹುದು. ಮನುಷ್ಯ ಮರಣಿಸಿದರೇ ಪುನಃ ಜನ್ಮಿಸುತ್ತಾನೆಂದು ಮನುಷ್ಯರಿಗೆ ತಿಳಿಸುವುದಕ್ಕೆ ಆತ್ಮ ಮಾಡಿದ ಕೆಲಸವಾಗಿ ನಾವು ಹೇಳಿಕೊಳ್ಳಬಹುದು. ಪ್ರತಿ ಮನುಷ್ಯನಲ್ಲಿ ಜೀವಾತ್ಮಗೆ ಜೊತೆಯಾಗಿ ಆತ್ಮ ನಿವಾಸಿಸುತ್ತಾ ಎಲ್ಲೋ ಒಂದು ಕಡೆ ಈ ವಿಧವಾದ ಜ್ಞಾಪಕವನ್ನು ತರಿಸಿದ ಸಂಘಟನೆಗಳೇ ಪುನರ್ಜನ್ಮ ವೃತ್ತಾಂತಗಳು. ಪುನರ್ಜನ್ಮಗಳು ಇಲ್ಲ ಎನ್ನುವವರ ವಾದನೆ ಅಬದ್ದವೆಂದೂ, ಇವೆಯೆನ್ನುವುದು ಶಾಸ್ತ್ರಬದ್ದವೆಂದೂ ಆತ್ಮ ತಿಳಿಸಿದ ಇಂತಹ ಸಂಘಟನೆಗಳಿಂದ ತಿಳಿಯುತ್ತಿದೆ.

**ಈ ವಿಷಯಗಳೆಲ್ಲವೂ ಪ್ರತ್ಯಕ್ಷವಾಗಿ ಕಾಣಿಸಿದರೂ ಪುನರ್ಜನ್ಮಗಳು ಇಲ್ಲ ಎನ್ನುವುದು ಅಜ್ಞಾನವಾಗುತ್ತದೆ.**

ಇಂತಿ

**ಯೋಗೀಶ್ವರ್**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

# ಕೃಷ್ಣ ಮೂಸ

## (ಶ್ರೀ ಕೃಷ್ಣ ಮರಣದ ನಂತರ ಜೀವನ)




**Author :**

**The Only GURU of Three Religions**

**The Spiritual Emperor, Thraitha Theorem Originator**

**Sri Acharya Prabodhananda Yogeeshwarulu**

www.thraithashakam.org